

# ಸಿದ್ಧಗಂಗಾ

ನವೆಂಬರ್ ೧೯೯೮



ರಾಜ್ಯೋತ್ಸವ ಸಂಚಿಕೆ

ಸೆಪ್ಟೆಂಬರ್ ೨೪, ೧೯೯೮ರಂದು ಸಿರಿಗೆರೆಯಲ್ಲಿ ನಡೆದ ಲಿಂ। ಶ್ರೀ ಶಿವಕುಮಾರ ಶಿವಾಚಾರ್ಯ ಮಹಾಸ್ವಾಮಿಗಳವರ ಆರನೆಯ ವಾರ್ಷಿಕ ಪುಣ್ಯಸ್ಮರಣೆ ಮತ್ತು ಇಷ್ಟಲಿಂಗ ಪೂಜಾನಿರತ ಕಂಚಿನ ಪ್ರತಿಮೆ ಪ್ರತಿಷ್ಠಾಪನೆ ಸಮಾರಂಭದ ದಿವ್ಯಸಾನಿಧ್ಯ ವಹಿಸಿದ್ದ ಪರಮ ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗೆ ಶ್ರೀ ತರಳಬಾಳು ಜಗದ್ಗುರು ಡಾ. ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರಿಂದ ಗೌರವ ಸಮರ್ಪಣೆ.

ಪ್ರಧಾನ ಸಂಪಾದಕರು
ಚನ್ನಪ್ಪ ಎರೇಸೀಮೆ

ಸಂಪಾದಕರು
ಹೆಚ್. ವಿ. ವೀರಭದ್ರಯ್ಯ

ಸಹ ಸಂಪಾದಕರು
ಎಚ್. ಎಸ್. ಸಿದ್ಧಗಂಗಪ್ಪ
ಎಂ. ರೇಣುಕಾರಾಧ್ಯ

ಸಲಹಾ ಸಮಿತಿ
ಡಾ. ಎಂ.ಎನ್. ಚನ್ನಬಸಪ್ಪ
ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ
ಗೊ.ರು. ಚನ್ನಬಸಪ್ಪ
ಟಿ. ಕೆ. ನಂಜುಂಡಪ್ಪ
ಟಿ.ಆರ್. ಮಹಾದೇವಯ್ಯ
ಪ್ರೊ. ಆರ್. ರಾಚಪ್ಪ
ಪಿ.ಎಸ್. ಪುಟ್ಟಶಂಕರಯ್ಯ
ಬಿ. ಎಸ್. ಪರಮಶಿವಯ್ಯ

ಸದಸ್ಯರು
ಕೆ.ಎಸ್. ಶಂಕರಯ್ಯ
ಸಿ. ಎಸ್. ಸಿದ್ಧಲಿಂಗಯ್ಯ
ಪಿ. ವಿ. ಹುಚ್ಚವೀರಯ್ಯ
ಕೆ. ಸಿ. ಶಿವಗಂಗಯ್ಯ
ಎಸ್. ವಿಶ್ವನಾಥ್
ಪಿ.ಎನ್. ಚಂದ್ರಶೇಖರಯ್ಯ
ಕೆ.ಎಚ್. ಶಿವರುದ್ರಯ್ಯ

ಪ್ರಕಾಶಕರು
ಹೆಚ್.ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಗಳ ಸಂಘ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-572 104

ಮುದ್ರಕರು :
ಗೀತಾಂಜಲಿ ಪ್ರಿಂಟರ್ಸ್, ನಂ. ೫,
ಎಂ.ಎಸ್.ಆರ್. ಕೈಗಾರಿಕಾ ಬಡಾವಣೆ,
ಗೋಕುಲ, ಬೆಂಗಳೂರು-೫೪
ದೂರವಾಣಿ - ೩೩೪೪೦೮೭


ಲೇಖಕರ ಅಭಿಪ್ರಾಯಗಳು
ಶ್ರೀ ಮಠದ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರು ಬಸವ ಲಿಂಗಾಯನಮಃ ॥

ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೩೪ ನವೆಂಬರ್ ೧೯೯೮ ಸಂಚಿಕೆ : ೧೦

## ಒಳಪುಟಗಳಲ್ಲಿ .....




**ವಿಳಾಸ :**
"ಸಂಪಾದಕರು", 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪

**ಚಂದಾ ವಿವರ :**
ವಾರ್ಷಿಕ ಚಂದಾ ರೂ. ೫೦.
ಆಜೀವ ಸದಸ್ಯತ್ವ ರೂ. ೫೦೦.
ಬಿಡಿ ಪ್ರತಿ ರೂ. ೫.00


ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ, ವಿಜ್ಞಾನ, ಶಿಕ್ಷಣ, ಇತಿಹಾಸ, ವೈಚಾರಿಕ ಮೊದಲಾದ ಲೇಖನಗಳಿಗೆ ಸ್ವಾಗತವಿದೆ.

## ಸಂಪಾದಕೀಯ ......

ನಲವತ್ತಮೂರನೆ ಕನ್ನಡ ರಾಜ್ಯೋತ್ಸವವನ್ನು ಆಚರಿಸುತ್ತಿದ್ದೇವೆ. ಎಲ್ಲೆಲ್ಲಿಯೂ ಜೈ ರಾಜರಾಜೇಶ್ವರಿ, ಜೈ ಭುವನೇಶ್ವರಿ ಘೋಷಣೆಗಳ ನಿರ್ಘೋಷ ಕೇಳುತ್ತಿದೆ. ಅಬ್ಬರದ,ಆವೇಶದ, ಆಡಂಬರದ ಮೆರವಣಿಗೆಗಳು ನಡೆದಿವೆ. ಕನ್ನಡಿಗರ ಅಭಿಮಾನವೆನ್ನೋಣವೆ? ಆವೇಶವೆನ್ನೋಣವೆ? ನವೆಂಬರ್ ತಿಂಗಳಿನಲ್ಲಿ ಉಕ್ಕೇರುವ ಈ ಅಭಿಮಾನದ ಬೇರುಗಳು ಬದುಕಿನಲ್ಲಿ ಬೇರು ಬಿಟ್ಟಿವೆಯೆ ಎಂದು ಪ್ರಶ್ನಿಸಿಕೊಳ್ಳಬೇಕಾಗಿದೆ. ಖಾಸಗಿಯಾಗಲಿ, ಸಾರ್ವಜನಿಕವಾಗಲಿ ಕನ್ನಡದ ಬಗ್ಗೆ ನಮಗಿರುವ ಅಭಿಮಾನವೆಷ್ಟು? ಒಂದು ಲಗ್ನ ಪತ್ರಿಕೆಯನ್ನು ಅಚ್ಚಿಸುವ ಸಂದರ್ಭದಲ್ಲಿ, ಒಂದು ದೂರವಾಣಿ ಸಂಖ್ಯೆ ಹೇಳುವಲ್ಲಿ, ಕೇಳುವಲ್ಲಿ, ಅಷ್ಟೂ ಬೇಡ ತನ್ನ ಪತ್ನಿಯನ್ನು, ಪತಿಯನ್ನು ಮತ್ತೊಬ್ಬರಿಗೆ ಪರಿಚಯಿಸುವ ಪ್ರಸಂಗದಲ್ಲಿ ಕನ್ನಡಾಭಿಮಾನ ವ್ಯಕ್ತವಾಗುತ್ತದೆಯೆ? ನಮ್ಮ ಕಲಾ ವೈಭವವನ್ನು ಪ್ರದರ್ಶಿಸುವ ವೇಳೆಯಲ್ಲಿ ಕನ್ನಡತನ ಮೈದೋರುವುದೆಷ್ಟು? ಆಡಳಿತದಲ್ಲಿ ಕನ್ನಡ ಜಾರಿಗೆ ಬರಲು ಇರುವ ಅಡ್ಡಿ ಅಡಚಣೆಗಳಿಗೆ ಅಭಿಮಾನದ ದಾರಿದ್ರ್ಯವೇ ಕಾರಣವಲ್ಲದೆ ಮತ್ತೇನು? ನುಡಿ ಬೆಳೆಯುವುದು ತನ್ನಿಂದ ತಾನೇ ಅಲ್ಲ; ನುಡಿಯನ್ನು ಬಳಸುವವರ ಅಭಿವ್ಯಕ್ತಿ ಸಾಮರ್ಥ್ಯದ ಮೇಲೆ.

ನಮ್ಮ ಹಿರಿಯರು ಶತ ಶತಮಾನಗಳಿಂದ ಕನ್ನಡವನ್ನು ಬೆಳೆಸಿದ್ದಾರೆ, ಉಳಿಸಿದ್ದಾರೆ. ಕಾವ್ಯಗಳ ಮೂಲಕ, ಶಿಲ್ಪಗಳ ಮೂಲಕ, ರಾಜ್ಯ ನಿರ್ಮಾಣಗಳ ಮೂಲಕ, ಆಡಳಿತಾತ್ಮಕವಾದ ಶಾಸನಗಳ ಮುಖೇನ ಭಾಷೆಯನ್ನು ಶ್ರೀಮಂತಗೊಳಿಸಿದ ಯಶಸ್ಸಿಗೆ ಭಾಜನರಾಗಿದ್ದಾರೆ. ಆಧ್ಯಾತ್ಮವನ್ನೂ ಅಭಿವ್ಯಕ್ತಿಸಿದ ವಚನಸಂಸ್ಕೃತಿಯ ಭಾಷಾ ಸಿದ್ಧಿ ಸಾಮಾನ್ಯವಾದುದೇನಲ್ಲ. ಮೇಲಾಗಿ ಜಾಗತಿಕಸ್ತರದಲ್ಲಿ ನಿಲ್ಲುವ ಕೆಲವು ಒಳ್ಳೆಯ ಲೇಖಕರು, ಕೆಲವು ಧಾರ್ಮಿಕ ಪಂಥಗಳು, ವಿಜ್ಞಾನಿಗಳು, ನೆಲ ಕಂಡದ್ದು ಕರ್ನಾಟಕದಲ್ಲಿ. ಇಂದು ನಮಗೆ ಅಗತ್ಯವಾಗಿ ಬೇಕಾಗಿರುವುದು ಜ್ಞಾನಪೀಠ ಪ್ರಶಸ್ತಿ ವಿಜೇತರಾದ ಡಾ.ಯು.ಆರ್. ಅನಂತಮೂರ್ತಿಯವರು ಹೇಳುವಂತೆ "ಕನ್ನಡದ ಬೆಳವಣಿಗೆಗೆ ಅಗತ್ಯವಾದ ಮೂರು ಸೂತ್ರಗಳು ತಪಸ್ಸು, ಸಂಘಟನೆ ಮತ್ತು ಅಹಿಂಸಾತ್ಮಕ ಹೋರಾಟ-ಸಾತ್ವಿಕ ಕೆಚ್ಚಿನ ಹೋರಾಟ" ಎಂಬುದನ್ನು ಮನಗಾಣಬೇಕಾಗಿದೆ. ಅವರೇ ಮುಂದುವರಿದು "ಕರ್ನಾಟಕವೆಂದರೆ ಒಂದು ಸಂಕ್ಷಿಪ್ತ ಭಾರತ - ಇಷ್ಟು ವಿಶಿಷ್ಟವಾದ ಸಂಗಮ ಬೇರೆ ರಾಜ್ಯಗಳಲ್ಲಿ ಕಾಣುವುದು ಅಪರೂಪ" ಎನ್ನುತ್ತ "ಕನ್ನಡ ಭಾಷೆಯ ಸ್ಥಿತಿಕೂಡ ಹಾಗಿದೆ. ಸುಸಂಸ್ಕೃತರಾದ ನಮ್ಮ ಅನಕ್ಷರಸ್ಥರು ಕಿವಿಯಿಂದ ಕಿವಿಗೆ ದಾಟುವಂತೆ ನಮ್ಮ ಪೌರಾಣಿಕ ಪ್ರಜ್ಞೆಯನ್ನು ಈ ಭಾಷೆಯಲ್ಲಿ ಉಳಿಸಿದ್ದಾರೆ. ಪಂಪನಿಂದ ಕುಮಾರವ್ಯಾಸನ ತನಕದ ಲೇಖಕರು ಸಂಸ್ಕೃತದ ಜೀವಾಳವನ್ನು ದೇಶೀಯ ಅಧಿಕೃತ ಧಾಟಿಯಲ್ಲಿ ಕನ್ನಡಿಸಿದ್ದಾರೆ. ವಚನಕಾರರು ಉಪನಿಷತ್ತಿನ ಋಷಿಗಳಂತೆ ಚಿಂತಿಸಿದ್ದಾರೆ. ನಮ್ಮ ಆಧುನಿಕರು ಐರೋಪ್ಯ ಸಂಸ್ಕೃತಿಯ ಜೀವಾಳವನ್ನು ತಮ್ಮತಮ್ಮ ವಿಶಿಷ್ಟ ಅನುಭವದ ಮೂಸೆಯಲ್ಲಿ ಎರಕ ಹೊಯ್ದು ಕನ್ನಡಕ್ಕೆ ತಂದಿದ್ದಾರೆ. ಕನ್ನಡ ಒಂದು ಜೀರ್ಣಾಗ್ನಿಯಂತೆ ಎಲ್ಲ ಭಾಷೆಗಳಿಂದಲೂ ತನ್ನ ಹವಿಸ್ಸನ್ನು ಪಡೆದಿದೆ. ತನ್ನತನ ಕಳೆದುಕೊಳ್ಳದಂತೆ ಪ್ರತಿಭಾಶಾಲಿಗಳಲ್ಲಿ ಮನಸ್ಸಿನ ವಿಸ್ತಾರವನ್ನು ಸಾಧಿಸಿಕೊಂಡಿದೆ" ಎಂದು ಕನ್ನಡದ ಎತ್ತರ-ಬಿತ್ತರಗಳನ್ನು ಮನವರಿಕೆ ಮಾಡಿಕೊಟ್ಟಿದ್ದಾರೆ.

ರಾಜ್ಯೋತ್ಸವವನ್ನಾಚರಿಸುತ್ತಿರುವ ಈ ಶುಭ ಸಂದರ್ಭದಲ್ಲಿ ಎಲ್ಲ ಕನ್ನಡಿಗರು ವಿಚಾರಶೀಲರಾಗಿ, ಅಭಿಮಾನಿಗಳಾಗಿ ಕನ್ನಡನುಡಿ, ಕನ್ನಡ ನೆಲ-ಜನ-ಜನಜೀವನದ ಶ್ರೀಮಂತಿಕೆಗೆ ಸಂಕಲ್ಪ ಮಾಡಲೆಂದು "ಸಿದ್ಧಗಂಗಾ" ಆಶಿಸುತ್ತದೆ. ನಮ್ಮ ಪತ್ರಿಕೆ ಚಂದಾದಾರರಿಗೆ, ಓದುಗರಿಗೆ ಕನ್ನಡರಾಜ್ಯೋತ್ಸವದ ಹಾರ್ದಿಕ ಶುಭಾಶಯಗಳು.

-- ಸಂಪಾದಕ





## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಶ್ರೀಗುರುವಿನ ಹಸ್ತದಲಿ ದಳದಳವಾಗರಳೀದೆ
"ಬಸವಣ್ಣ ಮೆಚ್ಚುವೊಲು" ನಡೆದಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಪರ್ವತೇಶನು ನೀನೆ ಕಾಶಿನಾಥನು ನೀನೆ
ಜ್ಯೋತಿರ್ಲಿಂಗನು ನೀನೆ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಎಡೆಯೂರಯ್ಯನು ನೀನೆ ಗುಬ್ಬಿಯಪ್ಪನು ನೀನೆ
ಚಿಕ್ಕತೊಟ್ಟಿಲುಕೆರೆಯ ಗುರುಮೂರ್ತಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಗುರುಲಿಂಗವೂ ನೀನೆ ಚರಲಿಂಗವೂ ನೀನೆ
ಪ್ರಾಣಭಾವಲಿಂಗ ನೀನಯ್ಯಾ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಭಾವಸಿರಿ ಬಾಸುವೆ ಜೀವಸಿರಿ ನೇಸರವೆ
ಕಾವಿರೂಪದಿನಿಂದ ಶ್ರೀಧರೆಯೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಭಕ್ತಿ ಜ್ಞಾನವೈರಾಗ್ಯ ಸಂಪತ್ತಿನ
ಶಕ್ತಿ ಸಂಪನ್ನ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಮತಿಗೆ ಮಂಗಳವೀವ ಯತಿರಾಜ ಶಿವತೇಜ
ಸಹಜ ಸುಂದರ ಸೂರ್ಯ ಶ್ರೀಗುರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ತತ್ವ ಪ್ರವಚನಸಾರ ನಿತ್ಯ ಪ್ರಸಾದವ
ಸತ್ವ ಸದ್ಭಾವದಿ ನೀಡುತಿಹ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಗುರುಲಿಂಗ ಜಂಗಮವೆ ಪರಮಾರಾಧ್ಯ ಶ್ರೀಯೆ
ನಿರುತ ನಿರಂಜನ ಮಂಗಳವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

ಸುಮತಿ ಸುಬಂಧುರ ಸುರುಚಿರಶಿವನಿಧಿಯೆ
ಸುಮರೂಪ ಶಿವಮನದ ಸಮರಸವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು॥

-- ಹೆಚ್. ವಿ. ವೀರಭದ್ರಯ್ಯ



## ಶ್ರೀ ವಾಣಿ

ಬದಲಾವಣೆ ಆಗುತ್ತಿದೆ. ಜೀವನದ ಎಲ್ಲ ಕ್ಷೇತ್ರಗಳಲ್ಲೂ ಬದಲಾವಣೆ ಆಗುತ್ತಿದೆ. ವೇಗವಾಗಿ ಆಗುತ್ತಿದೆ. ವಿಜ್ಞಾನವಂತೂ ಅನೂಹ್ಯ ವೇಗದಲ್ಲಿ ಬದಲಾವಣೆಯನ್ನು ತರುತ್ತಿದೆ. ದೇಶ ಕಾಲಗಳನ್ನು ಹತ್ತಿರಕ್ಕೆ ತರುತ್ತಿದೆ. ಜಗತ್ತನ್ನು ಅಂಗೈಯನೆಲ್ಲಿಯನ್ನಾಗಿಸುತ್ತಿದೆ. ಇನ್ನು ಸಾಮಾಜಿಕ ಬದಲಾವಣೆಯಂತೂ ಮನೋವೇಗದಲ್ಲಿ ದಾಪುಗಾಲು ಹಾಕುತ್ತಿದೆ. ಆಹಾರ-ವಿಹಾರಗಳಲ್ಲಿ, ಆಚಾರ-ವಿಚಾರಗಳಲ್ಲಿ, ಉಡುಗೆ-ತೊಡುಗೆಗಳಲ್ಲಿ, ನಡೆ-ನುಡಿಗಳಲ್ಲಿ ನಡೆದಿರುವ ಬದಲಾವಣೆ ಅಗಾಧವಾಗಿದೆ. ನಿನ್ನೆಯದು ಇಂದಿಗೆ ಹಳಸಲಾದರೆ ಇಂದಿನದು ನಾಳೆಗೆ ತಂಗಳಂಬಂತಾಗಿದೆ. ಹೊಸತು ಬೇಕು ಎಂಬುದರ ಹಂಬಲ ಅತೀವವಾಗಿದೆ.

ರಾಜಕೀಯದಲ್ಲಂತೂ ಬದಲಾವಣೆಗಾಗಿ ಭಿನ್ನಮತ, ಬಂಡಾಯಗಳ ದಂಡುದಾಳಿ ಕಂಡಕಂಡಲ್ಲಿ ನಡೆದಿದೆ. ರಾಷ್ಟ್ರ, ರಾಜ್ಯಗಳ ಆಡಳಿತ ಸೂತ್ರ ಹಿಡಿದಿರುವವರ ಶಕ್ತಿ ಸಂಚಯವೆಲ್ಲ ವ್ಯರ್ಥ ಚಟುವಟಿಕೆಗಳಿಗೆ ವಿನಿಯೋಗವಾಗುತ್ತಿದೆ. ನಾಡು, ದೇಶ ಎಂಬ ನುಡಿಗಳೇ ಕ್ಲೇಶಗೊಳಗಾಗುವಷ್ಟು ಬದಲಾವಣೆಯ ಭ್ರಮೆ ವ್ಯಾಪಿಸಿದೆ.

ಧಾರ್ಮಿಕ ಕ್ಷೇತ್ರವೂ ಬದಲಾವಣೆಯ ಭ್ರಾಂತಿಗೆ ತನ್ನನ್ನು ಪ್ರತಿದಿನ ತೆತ್ತುಕೊಳ್ಳುವ ಪರಿಸ್ಥಿತಿ ನಿರ್ಮಾಣ ನಡೆದಿದೆ. ಎಲ್ಲ ಬದಲಾವಣೆಯೂ ಭೌತಿಕ ಬದುಕಿನೊಂದಿಗೆ ಥಳಕು ಹಾಕಿಕೊಂಡಿದೆ. ಬದಲಾವಣೆಯೇ ಜೀವಂತಿಕೆ. ನಿಜ, ಯಾವ ಬದಲಾವಣೆ? ಎಂಥ ಬದಲಾವಣೆ? ಎಷ್ಟು ಬದಲಾವಣೆ? ಎಂಬ ಒಳತತ್ವ ತಿಳಿಯಬೇಕಾದ ಕಾಲ ಪ್ರಾಪ್ತವಾಗಿದೆ. ಏನು ಬದಲಾವಣೆಯಾದರೇನು? "ಏನಾದರೇನಣ್ಣ ತಾನಾಗದನಕ" ಎಂಬ ಅನುಭಾವವಾಣಿ ನಮ್ಮದಾಗಬೇಕಲ್ಲವೆ? ಅದಲ್ಲವೆ ನಿಜವಾದ ಬದಲಾವಣೆ.

ॐ



## ಶ್ರೀ ಸಿದ್ಧಲಿಂಗೇಶ್ವರ ವಚನ

ಹೊರಗೆವೇಷದಸೊಂಪು, ಒಳಗೆ ರೋಷದ ಮೊಟ್ಟೆಯಯ್ಯಾ,
ಅಶನವನಿಕ್ಕಿ ಹಣವ ಕೊಡದವರ ಕಂಡರೆ
ಶಾಪಿಸಿ ಕೋಪಿಸಿ ಪಾಪಿಗಳೆಂಬಿರಿಯಯ್ಯಾ
ನಿಮ್ಮ ಕಿಚ್ಚಿಗೆ ಶಾಪಿಸಿ ಕೋಪಿಸಿ ಹೊಯ್ದು ಕುತಾಪಿಸುವವರು
ನೀವು ಪಾಪಿಗಳಲ್ಲದೆ,
ಅವರು ಪಾಪಿಗಳೆ? ತಿಳಿದುನೋಡಿರಯ್ಯಾ
ಜಗದಕರ್ತನ ವೇಷವಧರಿಸಿ ಕರ್ತೃನೀವಾದ ಬಳಿಕ
ಮಾನವರು ಕೊಟ್ಟರು ಕೊಡರು ಎಂಬ ಭ್ರಾಂತಿಯೇಕೆ?
ಅರೆಮರುಳುಗಳಿರಾ, ಕೊಡುವಾತ ಶಿವನೆಂದರಿಯದ
ಉದರಘಾತಕ ಖಿಲ್ಲರನೊಲ್ಲ,
ಮಹಾಲಿಂಗಗುರುಶಿವಸಿದ್ಧೇಶ್ವರ ಪ್ರಭುವೇ!

ಜಗತ್ತನ್ನು ನಿರ್ಮಿಸಿದ ಶಿವನ ವೇಷವನ್ನು ಕೊಟ್ಟು-ಕೊಂಡವರು ಸಾಮಾನ್ಯ ಜನರಿಂದ ತಮ್ಮ ಅಭಿಲಾಷೆಗಳನ್ನು ಪೂರೈಸಿಕೊಳ್ಳುವ ಭ್ರಾಂತಿಯನ್ನು ಹೊಂದುವುದು ತರವಲ್ಲ. ಹೊರಗೆ ವೇಷದ ಸೊಂಪು ಒಳಗೆ ದ್ವೇಷದ ಮೊಟ್ಟೆಯನ್ನು ಹೊತ್ತುಕೊಂಡು ತಮಗೆ ಉಣಿಸಿ ದಕ್ಷಿಣೆ ಕೊಡದಿದ್ದವರನ್ನು ಕೋಪದಿಂದ ಶಾಪಿಸುವವರು ನಿಜವಾಗಿಯೂ ಪಾಪಿಗಳೇ ಆಗಿರುವರು. ಇಂಥ ಉದರಘಾತಕರಾದ ಪಾಪಿಗಳನ್ನು ಶಿವನು ಎಂದೂ ಮೆಚ್ಚನು.

(**ಕೃಪೆ** : ಷಟ್‌ಸ್ಥಲ ಜ್ಞಾನ ಸಾರಾಮೃತ - ಶ್ರೀ.ತೋ.ಸಿ.ಕೈಂ. ಸೇ. ಸಂಘ, ಎಡೆಯೂರು-ಗದಗ)

## ಜಂಗಮ ಪುರುಷ



ಎಲ್ಲರೊಳಗೊಂದಾಗಿ, ಎಲ್ಲರಿಗೂ ಬೇಕಾಗಿ
ಎಲ್ಲರೆಲ್ಲಾ ಏಳಿಗೆ ಸಾಧಿಸಲು, ಎಲ್ಲವನು ಧಾರೆಯೆರೆದ ಗುರು ನೀನು
ಅಣ್ಣ ಬಸವಣ್ಣ, ಚನ್ನಬಸವಣ್ಣ
ಅಲ್ಲಮರ ಸೂಳ್ನುಡಿಯ ಕೇಳಿಹೆವು ಮಾತ್ರ,
ಇವರೆಲ್ಲರನು ಕಾಣುತಿಹೆವು - ನಿನ್ನಲ್ಲಿ ಓ ಗುರುವೆ!
'ಕಾಯಕ'ಕೆ ಅರ್ಥ ನೀನು; ಅನ್ನದಾನಕೆ ಮೊದಲು ನೀನು
ಜ್ಞಾನದಾನಕೆ ಗುರು ನೀನು ಓ ಗುರುವೆ, ಬಾಳಿನ ಅರ್ಥವೇ ನೀನು
ನಿನ್ನ ಬಳಿ ಬಂದವರು ಬಿಡುಗಡೆಯ ಪಡೆವರು
ನಿನ್ನೊಡನೆ ನುಡಿದವರು ಮೂಕವಿಸ್ಮಿತರು
ನಿನ್ನಡಿಯು ಸೋಂಕಿದರೆ, ಪಾಪ ತಾನೋಡುವುದು ಗುರುವೇ,
ಬಳಿಗೆ ಬಂದವರನೆಲ್ಲ ಬಂಗಾರವಾಗಿಸುವ
ಸಿದ್ಧಗಂಗೆಯ ಸಿದ್ಧಪುರುಷ ನೀನೊಂದು ಜಂಗಮಪುರುಷ

**- ಪ್ರೊ. ಆರ್. ರಾಚಪ್ಪ**
೧೨೫೯, ೭ನೇ ಟಿ ಮುಖ್ಯರಸ್ತೆ,
ವಿಜಯನಗರ, ಎರಡನೇ ಹಂತ,
ಬೆಂಗಳೂರು-೫೬೦ ೦೪೦







# ಕರ್ನಾಟಕದ ಸಂಕ್ಷಿಪ್ತ ಚರಿತ್ರೆ

**- ಡಾ. ಎಂ. ಚಿದಾನಂದಮೂರ್ತಿ**
ಖ್ಯಾತ ಸಂಶೋಧಕರು ಮತ್ತು ನಿವೃತ್ತ ಪ್ರಾಧ್ಯಾಪಕರು,
'ಮಿಂಚು', ೭/ಎ, ೪ನೆಯ ತಿರುವು, ೧೧ನೆಯ ಮುಖ್ಯರಸ್ತೆ,
ವಿಜಯನಗರ ಎರಡನೆ ಹಂತ,
ಬೆಂಗಳೂರು-೪೦

ಕರ್ನಾಟಕಕ್ಕೆ ತನ್ನದೇ ಆದ ಸುದೀರ್ಘವಾದ ಇತಿಹಾಸವಿದೆ. ಭವ್ಯ ಪರಂಪರೆಯಿದೆ. ಅತ್ಯುಜ್ವಲವಾದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆ ಇದೆ. ಕರ್ನಾಟಕದ ಹೆಸರು ವ್ಯಾಸಭಾರತದಲ್ಲೇ ಉಲ್ಲೇಖವಾಗಿದೆ ಎಂಬ ಅಭಿಪ್ರಾಯವೂ ಇದೆ. ಕರ್ನಾಟಕವು ಮೌರ್ಯರು, ಶಾತವಾಹನರು, ಪಲ್ಲವರು, ಕದಂಬರು, ಗಂಗರು, ಬಾದಾಮಿ ಚಾಲುಕ್ಯರು, ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಹೊಯ್ಸಳರು, ಕೆಳದಿ, ಮೈಸೂರು ಅರಸರು ಮೊದಲಾದವರ ಆಳ್ವಿಕೆಗೆ ಒಳಪಟ್ಟಿತ್ತು.

ಕರ್ನಾಟಕಕ್ಕೆ ಭಾರತದಲ್ಲೇ ಅತ್ಯುಜ್ವಲವಾದ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆ ಇದೆ. ಕರ್ನಾಟಕದ ಹೆಸರು ವ್ಯಾಸ ಮಹಾಭಾರತದಲ್ಲೇ ಉಲ್ಲೇಖವಾಗಿದೆ ಎಂದು ಕೆಲವು ವಿದ್ವಾಂಸರು ಅಭಿಪ್ರಾಪಟ್ಟಿದ್ದಾರೆ. 'ಕರುನಾಡು' ಅಥವಾ ಎತ್ತರದ ಭೂಮಿ ಇರುವ ನಾಡು ಎಂಬುದೇ ಕರ್ನಾಟಕ ಆಗಿದೆ ಎಂದು ಹೇಳುವವರಿದ್ದಾರೆ. ಕಮ್ಮಿತ್ತು ನಾಡು, ಎಂದರೆ (ಶ್ರೀಗಂಧದ) ಕಂಪನ್ನುಳ್ಳ ನಾಡು ಎಂಬುದೇ ಕರ್ನಾಟಕ ಆಗಿದೆ ಎಂದೂ ಭಾವಿಸುವವರಿದ್ದಾರೆ. ಕ್ರಿ.ಪೂ. ೩ನೇ ಶತಮಾನದಲ್ಲಿ ಮೌರ್ಯರ ಅಶೋಕನ ಆಳ್ವಿಕೆಗೆ ಕರ್ನಾಟಕದ ಬಹುಭಾಗ ಒಳಪಟ್ಟಿದ್ದು ಆ ಚಕ್ರವರ್ತಿಯ ಎಂಟು ಶಾಸನಗಳು ಕರ್ನಾಟಕದಲ್ಲಿ ಸಿಕ್ಕಿವೆ. (ರಾಯಚೂರು ಜಿಲ್ಲೆಯ ಮಸ್ಕಿ ಮತ್ತು ಕೊಪ್ಪಳಗಳಲ್ಲಿ ಒಟ್ಟು ಮೂರು, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಜಟಿಂಗ, ರಾಮೇಶ್ವರ, ಸಿದ್ದಾಪುರಗಳಲ್ಲಿ ಮೂರು, ಬಳ್ಳಾರಿ ಜಿಲ್ಲೆಯ ನಿಟ್ಟೂರು ಉದಗೋಳಗಳಲ್ಲಿ ಎರಡು).

ಮೌರ್ಯರ ಬಳಿಕ ಶಾತವಾಹನರು ಆಳಿದರು. ಕೆಲಕಾಲ ಪಲ್ಲವರು ಕರ್ನಾಟಕದ ಕೆಲವು ಭಾಗಗಳನ್ನು ಆಳಿದರು.

### ಕದಂಬರು

ಕದಂಬರು ಉತ್ತರ ಜಿಲ್ಲೆಯ ಬನವಾಸಿಯಿಂದ ಕ್ರಿ.ಶ. ೩೪೫ರಿಂದ ಇನ್ನೂರು ವರ್ಷ ಸ್ವತಂತ್ರವಾಗಿ ರಾಜ್ಯಭಾರ ಮಾಡಿದರು. ಕರ್ನಾಟಕವನ್ನು ಆಳಿದ ಮೊದಲ ಕನ್ನಡಿಗ ದೊರೆಗಳೆಂದರೆ ಅವರೇ. ಅವರ ಮೂಲಸ್ಥಳ ಶಿವಮೊಗ್ಗ ಜಿಲ್ಲೆಯ ಶಿಕಾರಿಪುರ ತಾಲ್ಲೂಕಿನ ತಾಳಗುಪ್ಪ, ಬ್ರಾಹ್ಮಣರಾಗಿದ್ದ ಕದಂಬ ವಂಶದ ಮಯೂರ ಶರ್ಮ ಬಾಲ್ಯದಲ್ಲಿ ಉನ್ನತ ಶಿಕ್ಷಣಕ್ಕಾಗಿ ಕಂಚಿಗೆ ಹೋಗಿದ್ದಾಗ ಅಲ್ಲಿನ ಪಲ್ಲವರು ತಾವು ಕ್ಷತ್ರಿಯರೆಂಬ ಅಹಂಕಾರದಿಂದ ಆ ಹುಡುಗನನ್ನು ಅಪಮಾನಪಡಿಸಿದ್ದರಿಂದ ಅವನು ಖಡ್ಗ ಹಿಡಿದು ಕ್ಷತ್ರಿಯನಾಗಿ



ಹಂಪೆಯ ವಿರೂಪಾಕ್ಷ ದೇವಾಲಯ

ಪಲ್ಲವರನ್ನೇ ಸೋಲಿಸಿ, ಕದಂಬ ವಂಶವನ್ನು ಸ್ಥಾಪಿಸಿದನು. ಕರ್ನಾಟಕ ಮೊದಲ ಕನ್ನಡಿಗರ ರಾಜ್ಯ ಹೀಗೆ ಸ್ವಾಭಿಮಾನವನ್ನು ಕಾಪಾಡಿಕೊಳ್ಳಲು ಉದಯವಾಯ್ತು. ಕ್ಷತ್ರಿಯನಾದ ಮೇಲೆ ಮಯೂರ ಶರ್ಮನ ಹೆಸರು ಮಯೂರವರ್ಮ ಎಂದಾಯ್ತು. ಕನ್ನಡಿಗರ ಕೆಚ್ಚು, ಸ್ವಾಭಿಮಾನ, ಸಾಹಸಗಳಿಗೆ ಪ್ರತೀಕ ಅವನು. ಅವನ ಒಂದು ಸಂಸ್ಕೃತ ಶಾಸನವು ಚಿತ್ರದುರ್ಗ ಪಕ್ಕದ ಚಂದ್ರವಳ್ಳಿಯಿದೆ. ಆ ವಂಶದ ಕಾಕುಸ್ಥವರ್ಮನ ಜೊತೆ ಐದನೇ ಶತಮಾನದ ಪಾಟ್ನಾದ ಪ್ರಸಿದ್ಧಗುಪ್ತ ಚಕ್ರವರ್ತಿಗಳು ಸಂಬಂಧವನ್ನು ಬೆಳೆಸಿದರು.

### ಹಲ್ಮಿಡಿ ಶಾಸನ

ಕನ್ನಡ ಭಾಷೆ ಬಹು ಪ್ರಾಚೀನವಾದುದು. ಅದರ ಕೆಲ ಪದಗಳು ವೇದಗಳಲ್ಲಿ ಕ್ರಿ. ಶ. ಎರಡನೆಯ ಶತಮಾನದ ಗ್ರೀಕ್ ನಾಟಕದಲ್ಲಿ ದೊರೆಯುತ್ತವೆ. ಆದರೆ,ಕಲ್ಲಿನ ಮೇಲೆ ದೊರೆಯುವ ಮೊದಲ ಕನ್ನಡದ ಬರಹವೆಂದರೆ ಬೇಲೂರು ತಾಲ್ಲೂಕಿನ ಹನುಮಿಡಿ (ಹಲ್ಮಿಡಿ) ಎಂಬ ಗ್ರಾಮದ ಕ್ರಿ.ಶ. ೪೫೦ರ ಕದಂಬರ ಶಾಸನ. ಅದರಲ್ಲಿ ಪಲ್ಲವರೇ ಮೊದಲಾದವರನ್ನು ಸೋಲಿಸಿದ ವಿಜಾ ಅರಸ ಎಂಬ ವೀರ ಸೈನಿಕನಿಗೆ ಬಿಟ್ಟುಕೊಟ್ಟ ದಾನದ ವಿಷಯವನ್ನು ಹೇಳಿದೆ. ಬಹು ಸುಂದರವಾದ ಗದ್ಯ ಶೈಲಿ ಶಾಸನದ್ದು. ತಾಳಗುಂದದಲ್ಲಿ ಕ್ರಿ.ಶ. ೧೫೦ರ ಕದಂಬರ ಒಂದು ದೊಡ್ಡ ಸಂಸ್ಕೃತ ಶಾಸನವಿದೆ.

### ಬನವಾಸಿ

ಬನವಾಸಿ ವರದಾ ನದಿಯು ಮೂರೂ ಕಡೆ ಸುತ್ತುವರಿದಿರುವ ಮಲೆನಾಡಿನ ಸುಂದರ ಊರು. ಆ ಊರಿನ ಮಧುಕೇಶ್ವರ ದೇವಾಲಯ, ಅದರಲ್ಲಿರುವ ಇಕ್ಕೇರಿ ಅರಸರ ಕಾಲದ ಕಲ್ಲು ಮಂಚ ನೋಡಬೇಕಾದಂಥವು. ಬನವಾಸಿಯು ಹಿಂದೂ ಧರ್ಮದ ಕೇಂದ್ರವಾಗಿದ್ದಂತೆಯೇ ಬಹು ದೊಡ್ಡ ಬೌದ್ಧ ಕೇಂದ್ರವೂ ಆಗಿದ್ದಿತು.

### ಗಂಗರು

ಕದಂಬರ ಕಾಲದಲ್ಲಿ ದಕ್ಷಿಣ ಕರ್ನಾಟಕದ ಮೈಸೂರು ಜಿಲ್ಲೆಯ ತಲಕಾಡಿನಿಂದ ಗಂಗರು ಆಳುತ್ತಿದ್ದರು. (ಕ್ರಿ. ಶ. ೩೫೦ - ಕ್ರಿ.ಶ. ೧೦೦೦) ಇವರ ಮೊದಲ ರಾಜಧಾನಿ ಕೋಲಾರ. ಇವರ ಮೂಲ ಪುರುಷ ಕೊಂಗುಣಿವರ್ಮ. ಗಂಗರ ಶಾಸನಗಳಲ್ಲಿ ಆ ದೊರೆಗಳನ್ನು ಪ್ರಜೆಗಳ ಕ್ಷೇಮವೊಂದೇ ತಮ್ಮ ಅಧಿಕಾರದಿಂದ ಪಡೆಯುವ ಪ್ರಯೋಜನವುಳ್ಳವರೆಂದೂ, "ಯುದ್ಧಗಳಲ್ಲಿ ಮೈತುಂಬ ಆದ ಗಾಯಗಳಿಂದ ಶೋಭಿಸುವರು" ಎಂದೂ ಮುಂತಾಗಿ ಹೊಗಳಿದೆ. ಇವರಲ್ಲಿ ದುರ್ವಿನೀತ (ಕ್ರಿ. ಶ. ೬೦೦) ಎಂಬಾತನ ಅಸ್ಥಾನದಲ್ಲಿ ಸಂಸ್ಕೃತ ಕವಿ ಭಾರವಿ ಕೆಲಕಾಲ ಇದ್ದನು. ದುರ್ವಿನೀತನೇ ಸ್ವತಃ ವಿದ್ವಾಂಸ. ಕನ್ನಡ ಕವಿ. ಕ್ರಿ. ಶ. ೬೭೦ರಲ್ಲಿದ್ದ ಭೂವಿಕ್ರಮ ಎಂಬ ದೊರೆಯು ಕಂಚಿಯ ಪಲ್ಲವರ ಪರಮೇಶ್ವರವರ್ಮನನ್ನು ಸೋಲಿಸಿ "ಉಗ್ರೋದಯ" ಎಂಬ ರತ್ನ ಕಂಠಹಾರವನ್ನು ಕಿತ್ತುಕೊಂಡ ಶೂರ. ಕ್ರಿ. ಶ. ೯೫೦ರ ಬೂತುಗ ಎಂಬ ದೊರೆಯು ರಾಷ್ಟ್ರಕೂಟರ ಪರವಾಗಿ ಪಲ್ಲವರ ಮೇಲೆ ಯುದ್ಧ ಮಾಡಿ ಪಲ್ಲವ ದೊರೆಯ ಆನೆಯ ಅಂಬಾರಿಗೆ ನೆಗೆದು ದೊರೆಯನ್ನು ಕೊಂದು ಹಾಕಿದ. ಅವನ ಕೈಕೆಳಗಿನ ಮಣಲೇರ ಎಂಬ ಸೈನಿಕನ ಕಾಳಿ ಎಂಬ ನಾಯಿಗೂ ಒಂದು ಕಾಡು ಹಂದಿಗೂ ಜಗಳವಾಗಿ ಎರಡೂ ಸಾಯುತ್ತವೆ. ಮಣಲೇರನು ತನ್ನ ಪ್ರೀತಿಪಾತ್ರ ನಾಯಿಗೆ ಮದ್ದೂರು ತಾಲ್ಲೂಕು ಆತಕೂರಿನಲ್ಲಿ ಹಾಕಿಸಿದ ವೀರಗಲ್ಲಿನ ಸ್ಮಾರಕವು ಈಗ ಬೆಂಗಳೂರು ಮ್ಯೂಜಿಯಮ್ಮಿನಲ್ಲಿದೆ.

### ಗೊಮ್ಮಟ-ಚಾವುಂಡರಾಯ

ಮಧ್ಯಭಾರತದವರೆಗೆ ರಾಷ್ಟ್ರಕೂಟರ ಪರವಾಗಿ ಹೋಗಿ ಹೋರಾಡಿ ಸಾಹಸವನ್ನು ಮೆರೆದ ಗಂಗ ದೊರೆ. ಮಾರಸಿಂಹನ (ಕ್ರಿ.ಶ. ೯೭೦) ಮಂತ್ರಿ ಮತ್ತು ದಳಪತಿ ಚಾವುಂಡರಾಯ ದೊಡ್ಡ ಶೂರ, ವಿದ್ವಾಂಸ, ಕವಿ. ಅವನು ಕನ್ನಡದಲ್ಲಿ ಜೈನರಿಗೆ ಪವಿತ್ರವಾದ **"ಚಾವುಂಡರಾಯ ಪುರಾಣ"**ವನ್ನು ಬರೆದನು. ಅವನು ಶ್ರವಣಬೆಳಗೊಳದಲ್ಲಿ ಕೆತ್ತಿಸಿದ ಗೊಮ್ಮಟ ವಿಗ್ರಹವು ಲೋಕಪ್ರಸಿದ್ಧ. ವಿಶ್ವದಲ್ಲೇ ಪ್ರಾಚೀನ ಕಾಲದ ಏಕೈಕ ಬೃಹತ್ ಶಿಲಾಶಿಲ್ಪ, ಅದರ ಎತ್ತರ ೫೮ ಅಡಿ. ಕಾಲ ಹೆಬ್ಬೆರಳಿನ ಉದ್ದ ಎರಡಡಿ ಒಂಬತ್ತು ಅಂಗುಲ. ಕೈಯ ನಡುಬೆರಳಿನ ಉದ್ದ ಐದು ಅಡಿ. ಎಷ್ಟು ಬೃಹತ್ ಶಿಲ್ಪವೋ ಅಷ್ಟೇ ಸೌಮ್ಯ, ಶಾಂತ ಶಿಲ್ಪ. ಅಸೀಮ ತ್ಯಾಗ. ಸ್ವಾಭಿಮಾನಗಳಿಗೆ ಸಂಕೇತ ಗೊಮ್ಮಟ ಶಿಲ್ಪ, ಕರ್ನಾಟಕದ ಒಂದು ದೊಡ್ಡ ಹೆಮ್ಮೆ ಅದು. ಗಂಗರ ರಾಜಧಾನಿ ತಲಕಾಡಿನಲ್ಲಿ ನೋಡಬೇಕಾದ ಹಲವು ದೇವಾಲಯಗಳಿವೆ.

### ಬಾದಾಮಿ ಚಾಲುಕ್ಯರು

ಬಿಜಾಪುರ ಜಿಲ್ಲೆಯ ಬಾದಾಮಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕ್ರಿ.ಶ. ೫೦೦ರಿಂದ ಕ್ರಿ.ಶ. ೭೫೦ರವರೆಗೆ ಆಳಿದ ಚಾಲುಕ್ಯರು ಅಖಿಲ ಭಾರತ ಕೀರ್ತಿಯನ್ನು ಪಡೆದ ಕನ್ನಡಿಗ ಸಾರ್ವಭೌಮ ಸಾಮ್ರಾಟರು. ವಂಶದ ಪುರುಷ ಜಯಸಿಂಹ. ಮೊದಲನೆಯ ಪುಲಿಕೇಶಿಯು (ಕ್ರಿ. ಶ. ೫೪೦) ಬಾದಾಮಿಯಲ್ಲಿ ಅಭೇದ್ಯವಾದ ಕೋಟೆ ಕಟ್ಟಿಸಿದನು. ಇಮ್ಮಡಿ ಪುಲಿಕೇಶಿಯು ಅತ್ಯಂತ ಪ್ರಖ್ಯಾತ. ಮಧ್ಯಭಾರತದ ಮಾಳವರನ್ನು ಗುರ್ಜರರನ್ನೂ ಸೋಲಿಸಿದನು. ಕ್ರಿ. ೬೧೨ರಲ್ಲಿ ಉತ್ತರದ ಶ್ರೀ ಹರ್ಷನು ಅಹಂಕಾರದಿಂದ ದಂಡೆತ್ತಿ ಬಂದಾಗ ಅವನ ಸೈನ್ಯವನ್ನು ನಿರ್ಮೂಲ ಮಾಡಿ ನರ್ಮದೆಯ ಆಚೆಗೆ ಅಟ್ಟಿ **"ಪರಮೇಶ್ವರ"**ನೆಂಬ ಬಿರುದನ್ನು ಧರಿಸಿದನು. ಕೋಸಲ. ಕಳಿಂಗದ ದೊರೆಗಳು ಅವನಿಗೆ ಶರಣಾಗತರಾದರು. ಕಂಚಿಯ ಮಹೇಂದ್ರವರ್ಮನನ್ನು ಸೋಲಿಸಿದನು. ಅವನ ಕಾಲದಲ್ಲಿ ಅವನ ರಾಜ್ಯಕ್ಕೆ ಬಂದ ಚೀನಿ ಪ್ರವಾಸಿ ಹುಯೆನ್‌ತ್ಸಾಂಗನು. **"ಪ್ರಜೆಗಳ ಮತ್ತು ಭಟರ ಪ್ರೀತಿಯನ್ನು ಸಂಪಾದಿಸಿರುವ ಪುಲಿಕೇಶಿಗೆ ಆ ಪ್ರೀತಿಯೇ ನಿಜವಾದ ಕೋಟೆ. ಅವನ ಸೈನಿಕರು ಸೋತು ಹೋದರೆ ಎಲ್ಲಿ ತಮ್ಮ ಹೆಂಗಸರು ಬಳೆ ಕುಂಕುಮ ಕೊಟ್ಟು ಅಪಮಾನಿಸುತ್ತಾರೋ ಎಂದು ಹೆದರಿ ಹೋರಾಡುತ್ತಾರೆ. ಸೋತು ಎಂದೂ ಹಿಂದಕ್ಕೆ ಬರರು. ಕನ್ನಡಿಗರು ಅಸಹಾಯಶೂರರು"** ಎಂದು ವರ್ಣಿಸಿದ್ದಾನೆ. ದಕ್ಷಿಣ ಮಹಾರಾಷ್ಟ್ರವೆಲ್ಲ ಪುಲಿಕೇಶಿಯ ಅಧೀನದಲ್ಲಿತ್ತು. ಕರ್ನಾಟಬಲ ಎಂದರೆ ಚಾಲುಕ್ಯರ ಸೇನೆಯು, ವಿಶ್ವದಲ್ಲೇ ಅಜೇಯ ಎಂದು ಪ್ರಖ್ಯಾತವಾಗಿತ್ತು. ಆ ವಂಶದ ವಿಕ್ರಮಾದಿತ್ಯನಿಗೆ **'ರಣರಸಿಕ'** ಎಂದು ಬಿರುದಿತ್ತು. ಪಲ್ಲವರು ಹಿಂದೆ ಬಾದಾಮಿಯನ್ನು ಗೆದ್ದು ಅದನ್ನು ಸುಟ್ಟಿದ್ದರೂ. ವಿಜಯಾದಿತ್ಯನೆಂಬ ಚಾಲುಕ್ಯ ದೊರೆ ಕಂಚಿಯನ್ನು ಹಾಳು ಮಾಡಲಿಲ್ಲ. ಅಲ್ಲಿನ ದೇವಾಲಯಗಳಿಗೆ ಅಪಾರ ಧನವನ್ನು ಕೊಟ್ಟನು. ಕನ್ನಡಿಗರು ಶೂರರು, ಆದರೆ ಧ್ವಂಸಕರಲ್ಲ. ಚಾಲುಕ್ಯನ ಕಾಲದಲ್ಲಿ ಅಚಲ ಎಂಬ ಶ್ರೇಷ್ಠ ನಟನಿದ್ದನು. ಇಮ್ಮಡಿ ಪುಲಿಕೇಶಿಯ ಸೊಸೆ ವಿಜ್ಜಿಕೆ ತನ್ನನ್ನು **'ಕರ್ಣಾಟಿ'** ಎಂದು ಹೆಮ್ಮೆಯಿಂದ ಕರೆದು ಕೊಂಡಿದ್ದಾಳೆ. ಕವಿತೆಯಲ್ಲಿ ಸಂಸ್ಕೃತದ ದಂಡಿಗಿಂತ ತಾನು ದೊಡ್ಡವಳು ಎಂದು ಸ್ವಾಭಿಮಾನದಿಂದ ಹೇಳಿಕೊಂಡಿದ್ದಾಳೆ. ಕ್ರಿ.ಶ. ಏಳು ನೂರರಲ್ಲಿದ್ದ ಕಪ್ಪೆ ಅರಭಟ್ಟನು "ತಾನು ಸಾಧುಗಳಿಗೆ ಅತಿ ಸಾಧು. ದುಷ್ಟರಿಗೆ ಅತಿದುಷ್ಟ" ಎಂದು ಹೊಗಳಿಕೊಂಡ ಮಹಾ ಸಾಹಸಿ.



ಹಂಪೆಯ ಉಗ್ರ ನರಸಿಂಹ

ಬಾದಾಮಿ ಚಾಲುಕ್ಯರ ಸಾಮ್ರಾಜ್ಯವು ಕರ್ನಾಟಕವನ್ನಲ್ಲದೆ ಆಂಧ್ರ, ಮಹಾರಾಷ್ಟ್ರ, ಗುಜರಾತ್, ಮಧ್ಯಪ್ರದೇಶವನ್ನೂ ಒಳಗೊಂಡಿತ್ತು.

### ಬಾದಾಮಿ, ಐಹೊಳೆ, ಪಟ್ಟದಕಲ್ಲು

ಇವು ದಕ್ಷಿಣ ಭಾರತದ ಶಿಲ್ಪಕಲೆಯ ತವರು. ಬಾದಾಮಿಯ ಗುಹೆಗಳನ್ನು ಐಹೊಳೆ ಪಟ್ಟದಕಲ್ಲುಗಳ ಅಸಂಖ್ಯ ದೇವಾಲಯಗಳನ್ನು ಎಲ್ಲ ಕನ್ನಡಿಗರೂ ಅವಶ್ಯ ಒಮ್ಮೆ ನೋಡಲೇಬೇಕು. ಕಲ್ಲಿನಲ್ಲಿ ಪ್ರಾಣವನ್ನು ಕಂಡರಿಸಿರುವ ಶಿಲ್ಪಿಗಳ ಕಲೆ ಅತ್ಯದ್ಭುತ.

### ರಾಷ್ಟ್ರಕೂಟರು

ಬಾದಾಮಿ ಚಾಳುಕ್ಯರನ್ನು ಸೋಲಿಸಿ ಸಾಮ್ರಾಟರಾದ ರಾಷ್ಟ್ರಕೂಟರು ಗುಲ್ಬರ್ಗಾ ಜಿಲ್ಲೆಯ ಮಳಖೇಡದಿಂದ ಕ್ರಿ. ಶ. ೭೫೦ ರಿಂದ ಕ್ರಿ. ಶ. ೯೮೦ರವರೆಗೆ ಆಳಿದರು. ಇವರ ಮೂಲ ಪುರುಷ ದಂತಿದುರ್ಗ ಒಂದನೆಯ ಕೃಷ್ಣನು (ಕ್ರಿ. ಶ. ೭೭೫) ಎಲ್ಲೋರದಲ್ಲಿ ಒಂದೇ ದೊಡ್ಡ ಕಲ್ಲು ಬಂಡೆಯಲ್ಲಿ ಕೊರೆಯಿಸಿರುವ ಕೈಲಾಸನಾಥ ದೇವಾಲಯವು ವಿಶ್ವದ ವಿಸ್ಮಯಗಳಲ್ಲಿ ಒಂದು. ದೇವಾಲಯದ ಒಳಗಿನ ಶಿವಲಿಂಗವೂ ಅದೇ ಬಂಡೆಯದು. ರಾಷ್ಟ್ರಕೂಟ ದೊರೆಗಳಲ್ಲಿ ಧ್ರುವ ಮತ್ತು ಮೂರನೆಯ ಗೋವಿಂದರು (ಕ್ರಿ. ಶ. ೮೦೦) ಬಹು ಸಮರ್ಥರು. ಗೋವಿಂದನ ಸೈನ್ಯವು ಸಿಂಹಳದಿಂದ ಹಿಮಾಲಯದವರೆಗೆ, ಗುಜರಾತಿನಿಂದ ಬಂಗಾಳದವರೆಗೆ ಇದ್ದ ಅಖಂಡ ಭಾರತವನ್ನು ಗೆದ್ದಿತು. ಇವನ ಮಗನೇ ಅಮೋಘವರ್ಷ ನೃಪತುಂಗ (ಕ್ರಿ. ಶ. ೮೫೦). ಇವನ ಕಾಲದಲ್ಲಿ ಶ್ರೀವಿಜಯನೆಂಬುವನು ನೃಪತುಂಗನ ಹೆಸರಲ್ಲಿ ಕವಿರಾಜಮಾರ್ಗವೆಂಬ ಕೃತಿಯನ್ನು ರಚಿಸಿದ. ಇದೇ ಈಗ ದೊರಕುವ ಕನ್ನಡ ಕೃತಿಗಳಲ್ಲಿ ಮೊದಲನೆಯದು. ಕಾವೇರಿಯಿಂದ ಗೋದಾವರಿಯವರೆಗೆ ಕನ್ನಡನಾಡು ಹಬ್ಬಿತ್ತೆಂದು ಆ ಕೃತಿಯಲ್ಲಿ ಹೇಳಿದೆ. ಕನ್ನಡಿಗರು ಶೂರರು, ಸ್ವಾಭಿಮಾನಿಗಳು. ಅತ್ಯುಗ್ರರಾದರೂ

ವಿವೇಕಿಗಳು. ಎಲ್ಲರೂ ಕಾವ್ಯಜ್ಞರು, ಹೆಚ್ಚು ಓದದವರೂ ಕಾವ್ಯವನ್ನು ಕೇಳಿ ಅರ್ಥ ಮಾಡಿಕೊಳ್ಳಬಲ್ಲಷ್ಟು ಸೂಕ್ಷಜ್ಞರು ಎಂದು ಮುಂತಾಗಿ ಅಲ್ಲಿ ವರ್ಣಿಸಿದೆ. ರಾಜ್ಯಕ್ಕೆ ಕ್ಷಾಮ ಬಂದಾಗ ಕೊಲ್ಲಾಪುರದ ಮಹಾ ಲಕ್ಷ್ಮಿಗೆ ತನ್ನ ಬೆರಳನ್ನೇ ಒಪ್ಪಿಸಲು ನೃಪತುಂಗ ಸಿದ್ಧನಾದನು. ಅಂತಹ ಪ್ರಜಾವತ್ಸಲ ಅವನು. ಮೂರನೆಯ ಕೃಷ್ಣನ (ಕ್ರಿ. ಶ. ೯೫೦) ಕನ್ನಡ ಶಾಸನವೊಂದು ಮಧ್ಯಪ್ರದೇಶದಲ್ಲಿದೆ.

### ಕಲೆ, ಸಾಹಿತ್ಯ

ಅಜಂತ ಎಲ್ಲೋರ ಗುಹೆಗಳು. ಬೊಂಬಾಯಿ ಪಕ್ಕದ ಎಲಿಫೆಂಟಾ ಗುಹೆಗಳು ರಾಷ್ಟ್ರಕೂಟರ ಕೊಡುಗೆ. ಅವು ಕರ್ನಾಟಕದ ಕೊಡುಗೆ. ಕನ್ನಡ ಜನ ಅವನ್ನು ಕಲೆಯ ದೃಷ್ಟಿಯಿಂದ ಅಗತ್ಯವಾಗಿ ಹೋಗಿ ನೋಡಲೇಬೇಕು. ಪಂಪನು ತನ್ನ ಕೃತಿಗಳನ್ನು ರಾಷ್ಟ್ರಕೂಟರ ಸಾಮಂತನಾಗಿದ್ದ ಚಾಳುಕ್ಯ ದೊರೆ ಅರಿಕೇಸರಿಯ ಕಾಲದಲ್ಲಿ (ಕ್ರಿ. ಶ. ೯೪೧) ಬರೆದನು. ಪೊನ್ನ ಮೂರನೆಯ ಕೃಷ್ಣನ ತನ್ನ ಶಾಂತಿ ಪುರಾಣವೆಂಬ ಜೈನ ಧಾರ್ಮಿಕ ಕೃತಿಯನ್ನು ಬರೆದನು.

### ಕಲ್ಯಾಣ ಚಾಲುಕ್ಯರು

ಬಾದಾಮಿ ಚಾಲುಕ್ಯರ ಒಂದು ಶಾಖೆಯ ದೊರೆಯಾದ ತೈಲಪನು ರಾಷ್ಟ್ರಕೂಟರ ವಂಶವನ್ನು ಸೋಲಿಸಿ. ಸ್ವತಂತ್ರನಾದನು.

ದಕ್ಷಿಣ ಭಾರತದ ಶಿಲ್ಪಕಲೆಯ ತವರು ಬಾದಾಮಿಯ ಗುಹೆ



(ಕ್ರಿ.ಶ. ೯೭೩). ಈ ವಂಶದವರು ಮುಂದೆ ಬೀದರ್ ಜಿಲ್ಲೆಯ ಕಲ್ಯಾಣದಿಂದ ಆಳಲು ಆರಂಭಿಸಿದ್ದರಿಂದ ಕಲ್ಯಾಣ ಚಾಲುಕ್ಯರೆಂದು ಪ್ರಸಿದ್ಧರಾಗಿದ್ದಾರೆ. ಇವರು ಕ್ರಿ. ಶ. ೯೭೦ ರಿಂದ ಕ್ರಿ. ಶ. ೧೨೦೦ರವರೆಗೆ ಆಳಿದರು. ತೈಲಪ ಮತ್ತು ಅವನ ಮಗ 'ಇರಿವಬೆಡಂಗ ಸತ್ಯಾಶ್ರಯನ ಕಾಲದಲ್ಲಿದ್ದ ರನ್ನ (ಕ್ರಿ. ಶ. ೧೦೦೦) ಅಜಿತ ಪುರಾಣ ಮತ್ತು ಗದಾ ಯುದ್ಧಗಳನ್ನು ಬರೆದನು. ಜಯಸಿಂಹನ (ಕ್ರಿ. ಶ. ೧೦೪೦) ಸೋದರಿಯಾಗಿದ್ದ ಅಕ್ಕಾದೇವಿ ಎಂಬಾಕೆ ಸ್ವತಃ ಒಬ್ಬ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದುದಲ್ಲದೆ ಯುದ್ಧಗಳಲ್ಲಿ ಹೋರಾಡಿ ರಣಭೈರವಿ ಎಂಬ ಬಿರುದನ್ನು ಪಡೆದಿದ್ದಳು. ಆರನೆಯ ವಿಕ್ರಮಾಧಿತ್ಯ (ಕ್ರಿ. ಶ. ೧೧೦೦) ಅತ್ಯಂತ ಪ್ರಖ್ಯಾತ ಚಕ್ರವರ್ತಿ. ಇವನು ಪಟ್ಟವನ್ನು ಏರಿದ ಕ್ರಿ. ಶ. ೧೦೭೬ರಿಂದ ಚಾಳುಕ್ಯ ವಿಕ್ರಮ ಶಕೆಯನ್ನು ಆರಂಭಿಸಿದ ಇವನು ಚೋಳರನ್ನು ನಿರ್ಣಾಯಕವಾಗಿ ಸೋಲಿಸಿದನು. ಕಾಶ್ಮೀರದ ಕವಿ ಬಿಲ್ಲಣನು ಇವನ ಮೇಲೆ ಸಂಸ್ಕೃತದಲ್ಲಿ 'ವಿಕ್ರಮಾಂಕದೇವ ಚರಿತ' ಎಂಬ ಮಹಾಕಾವ್ಯವನ್ನು ರಚಿಸಿದನು. ಇವನ ಅಸ್ಥಾನದಲ್ಲಿದ್ದ ವಿಜ್ಞಾನೇಶ್ವರ ಎಂಬ ಕನ್ನಡಿಗ ವಿದ್ವಾಂಸನು ಬರೆದ ಮಿತಾಕ್ಷರಾ ಎಂಬ ವ್ಯಾಖ್ಯಾನವು ಬಂಗಾಳವನ್ನು ಬಿಟ್ಟರೆ ಇಡೀ ಭಾರತದಲ್ಲಿ ಹಿಂದೂಗಳು ಅನುಸರಿಸುತ್ತಿರುವ ನೀತಿ ಸಂಹಿತೆ ಯಾಗಿದೆ. ಇವನ ಪ್ರಕಾರ ಕಲ್ಯಾಣದಂತಹ ನಗರ ಮತ್ತು ವಿಕ್ರಮಾದಿತ್ಯನಂತಹ ದೊರೆ ಹಿಂದೆ ಇರಲಿಲ್ಲ. ತನ್ನ ಕಾಲದಲ್ಲೂ ಇಲ್ಲ. ಮುಂದೆಯೂ ಇರುವುದಿಲ್ಲ. ಮೂರನೆಯ ಸೋಮೇಶ್ವರ (ಕ್ರಿ.ಶ. ೧೧೩೦) **"ಸರ್ವಜ್ಞ ಚಕ್ರವರ್ತಿ"** ಎಂದೇ ಪ್ರಸಿದ್ಧನಾಗಿದ್ದು, ಸಂಸ್ಕೃತದಲ್ಲಿ **'ಅಭಿಲಷಿತಾರ್ಥ ಚಿಂತಾಮಣಿ'** ಅಥವಾ **'ಮಾನಸೋಲ್ಲಾಸ'** ಎಂಬ ಹೆಸರಿನ ಅದ್ಭುತ ವಿಶ್ವಕೋಶವನ್ನು ಸಂಸ್ಕೃತದಲ್ಲಿ ರಚಿಸಿದ್ದಾನೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ನಿರ್ಮಾಣಗೊಂಡ ಯಲಬುರ್ಗಾ ತಾಲ್ಲೂಕಿನ ಇಟಗಿಯ ಮಹಾದೇವ ದೇವಾಲಯವನ್ನು ಶಾಸನಗಳು ದೇವಾಲಯ ಚಕ್ರವರ್ತಿ ಎಂದು ಕರೆದಿವೆ.

### ಕಲ್ಯಾಣ-ವಚನ ಚಳವಳಿ

ಕಲ್ಯಾಣ ಚಾಳುಕ್ಯರ ಕಾಲದಲ್ಲೇ ಅವರ ದುರ್ಬಲ ರಾಜನನ್ನು ಕೊಂದು ಪಟ್ಟಕ್ಕೆ ಬಂದ ಬಿಜ್ಜಳನ ಕಾಲದಲ್ಲಿ (ಕ್ರಿ.ಶ. ೧೧೬೦) ಬಸವ, ಅಲ್ಲಮ, ಅಕ್ಕಮಹಾದೇವಿ, ಸಿದ್ಧರಾಮ, ಮಾದಾರ ಚನ್ನಯ್ಯ ಇವರೇ ಮೊದಲಾದವರು ಅದ್ಭುತವಾದ ಸಾಮಾಜಿಕ ಕ್ರಾಂತಿಯನ್ನೆಸಗಿದರು. ಅವರು ಬರೆದ ವಚನ ಸಾಹಿತ್ಯವು ಕನ್ನಡದ ಹೆಮ್ಮೆ ಕಲ್ಯಾಣದಲ್ಲಿ ಈಗಲೂ ಆ ಶಿವಶರಣ ಶರಣೆಯರ ಅನುಷ್ಠಾನದ ಗುಹೆಗಳಿವೆ.

### ಹೊಯ್ಸಳರು, ದೇವಗಿರಿ ಯಾದವರು

**ದೋರಸಮುದ್ರದ** (ಹಳೆಬೀಡು) ಹೊಯ್ಸಳರು, ದೇವಗಿರಿಯ (ಔರಂಗಾಬಾದ್ ಜಿಲ್ಲೆಯ ದೌಲತಾಬಾದ್) ಯಾದವರು ಕ್ರಿ.ಶ. ೧೨-೧೩ನೇ ಶತಮಾನಗಳಲ್ಲಿ ದಕ್ಷಿಣ ಕರ್ನಾಟಕ ಉತ್ತರ ಕರ್ನಾಟಕಗಳನ್ನಾಳಿದ ದೊರೆಗಳು. ಹೊಯ್ಸಳರ (ಕ್ರಿ.ಶ. ೧೦೦೦-೧೩೦೦) ವಿಷ್ಣುವರ್ಧನನು (ಕ್ರಿ.ಶ. ೧೧೪೦) ತಲಕಾಡು ಪ್ರದೇಶದಿಂದ ಚೋಳರನ್ನು ಅಟ್ಟಿ ತನ್ನ ವಶಕ್ಕೆ ತೆಗೆದುಕೊಂಡು ಕಂಚಿಯನ್ನು ವಶಪಡಿಸಿಕೊಂಡು **'ಕಂಚಿಗೊಂಡ'** ಎಂಬ ಬಿರುದನ್ನು ಸಂಪಾದಿಸಿದನು. ತಮಿಳುನಾಡಿನ ಶೈವ ದೊರೆಗಳ ಉಪಟಳವನ್ನು





ತಾಳಲಾರದೆ ಬಂದ ಶ್ರೀರಾಮಾನುಜರಿಗೆ ಅವನು ಆಶ್ರಯ ನೀಡಿದನು. ಅವನ ಪತ್ನಿ ಶಾಂತಲೆಯು ಪಟ್ಟದ ರಾಣಿಯಾಗಿ ರಾಜನಿಗೆ ಆಡಳಿತದಲ್ಲಿ ಸಲಹೆಗಳನ್ನು ಕೊಡುತ್ತಿದ್ದಳು. ಸ್ವತಃ ಶ್ರೇಷ್ಠ ಗಾಯಕಿಯೂ, ನರ್ತಕಿಯೂ ಆಗಿದ್ದ ಅವಳು ಕಲೆಗೆ ಅಪಾರ ಪ್ರೋತ್ಸಾಹವನ್ನು ಕೊಟ್ಟಳು. ಚಾಲುಕ್ಯರಿಂದ ಬಿಡುಗಡೆ ಹೊಂದಿ ಹೊಯ್ಸಳ ರಾಜ್ಯವು ಇವರ ಕಾಲದಲ್ಲಿ ಸ್ವತಂತ್ರವಾಗಿ ಮೆರೆಯಿತು. ಹೊಯ್ಸಳರಲ್ಲೆಲ್ಲ ಅತ್ಯಂತ ಬಲಿಷ್ಠನೆಂದರೆ ಇಮ್ಮಡಿ ವೀರಬಲ್ಲಾಳ (ಕ್ರಿ.ಶ. ೧೨೦೦). ಅವನ ಕಾಲದಲ್ಲಿ ಯುದ್ಧಗಳ ಮೇಲೆ ಯುದ್ಧಗಳು ನಡೆದವು. ವೀರಬಲ್ಲಾಳನ ಸಹಾಯದಿಂದ ಪಾಂಡ್ಯರ ಆಕ್ರಮಣಕ್ಕೆ ಒಳಗಾಗಿದ್ದ ಚೋಳರ ಅಧಿಪತ್ಯವು ಕುಸಿಯದಂತೆ ಉಳಿಯಿತು.

ಈಗ ಔರಂಗಾಬಾದ್ ಮಹಾರಾಷ್ಟ್ರದಲ್ಲಿದ್ದರೂ ಆ ಜಿಲ್ಲೆಯ ದೇವಗಿರಿಯಿಂದ (ಈಗ ದೌಲತಾಬಾದ್) ಆಳಿದ ಯಾದವರು (ಕ್ರಿ.ಶ. ೮೫೦-೧೩೩೦) ಕನ್ನಡಿಗರು ಮತ್ತು ಆ ಪ್ರದೇಶವೆಲ್ಲ ಆಗ ಕರ್ನಾಟಕವೇ ಆಗಿತ್ತು. (ಯಾದವರನ್ನು ಸೇವುಣರೆಂದೂ ಕರೆಯುತ್ತಾರೆ). ಐದನೆಯ ಬಿಲ್ಲಮನಿಂದ (ಕ್ರಿ.ಶ. ೧೧೮೦) ಯಾದವರು ಸ್ವತಂತ್ರರಾಗಿ ಆಳಿದರು. ದಕ್ಷಿಣಾಪಥದ ರಾಜನೇನೋ ಎನ್ನುವಷ್ಟರ ಮಟ್ಟಿಗೆ ಪ್ರಬಲನಾಗಿದ್ದ ಸಿಂಘಣ ಎಂಬ ದೊರೆಯ ರಾಜ್ಯವು ನರ್ಮದೆಗಿಂತ ಆಚೆ ದಾಟಿತ್ತು. ಮಹಾದೇವ ದೊರೆಯ (ಕ್ರಿ.ಶ. ೧೨೭೦) ಕಾಲದಲ್ಲಿದ್ದ ಹೇಮಾದ್ರಿ ಎಂಬ ವಿದ್ವಾಂಸನ ಚಾತುರ್ವರ್ಗ ಚಿಂತಾಮಣಿ, ಪ್ರತಖಂಡ ಇವೇ ಮೊದಲಾದವು ಪ್ರಖ್ಯಾತ ಗ್ರಂಥಗಳು. ಹೇಮಾದ್ರಿ ಎಂಬುದು ಹೆಮ್ಮಾಡಿ (ಪೆರ್ಮಾಡಿ, ಪೆರ್ಮಾನಡಿ) ಎಂಬ ಅಚ್ಚಗನ್ನಡ ಪದದ ಸಂಸ್ಕೃತ ರೂಪ ಎಂದು ದಿ. ತೀ.ನಂ. ಶ್ರೀಕಂಠಯ್ಯನವರು ಭಾವಿಸಿದ್ದರು. ಯಾದವರು ಭಾರತದ ಹೊರಗಿನ ದೇಶಗಳ ಜೊತೆ ವ್ಯಾಪಾರ ಸಂಪರ್ಕವನ್ನು ಇಟ್ಟುಕೊಂಡಿದ್ದರು.

### ಕಲೆ

**ಹೊಯ್ಸಳರು** ಕಲಾರಾಧಕರು. ಅವರ ದೇವಾಲಯಗಳ ಶೈಲಿ, ಹೊಯ್ಸಳ ಶೈಲಿ ಎಂದೇ ಪ್ರಸಿದ್ಧವಾಗಿದೆ. ಅವರು ಕಟ್ಟಿಸಿದ ಬೇಲೂರು, ಹಳೇಬೀಡು, ಸೋಮನಾಥ ದೇವಾಲಯಗಳು ಎಲ್ಲರೂ ಅತ್ಯವಶ್ಯ ದರ್ಶಿಸಬೇಕಾದವು. ಕನ್ನಡಿಗರಾಗಿದ್ದ ಯಾದವರಿಂದ ಮರಾಠಿ ಭಾಷೆ, ಸಾಹಿತ್ಯಗಳಿಗೆ ಪ್ರೋತ್ಸಾಹ ಸಿಕ್ಕಿತು.

### ವಿಜಯನಗರ ಸಾಮ್ರಾಜ್ಯ

ಬಳ್ಳಾರಿ ಜಿಲ್ಲೆಯ ಹಂಪೆಯನ್ನು ರಾಜಧಾನಿಯನ್ನಾಗಿ (ರಾಜಧಾನಿ ಪ್ರದೇಶಕ್ಕೆ ವಿಜಯನಗರ ಎಂದು ಹೆಸರಿತ್ತು) ಮಾಡಿಕೊಂಡು ಕ್ರಿ.ಶ. ೧೩೩೬ ರಿಂದ ೧೫೬೫ರವರೆಗೆ ವಿಜಯನಗರ ಸಾಮ್ರಾಜ್ಯವು ಮೆರೆಯಿತು. ಇಡೀ ಕರ್ನಾಟಕ. ಆಂಧ್ರ,



ಐಹೊಳೆಯಲ್ಲಿರುವ ಶಿಲ್ಪಕಲಾ ವೈಭವ

ತಮಿಳುನಾಡುಗಳನ್ನಲ್ಲದೆ ಮಹಾರಾಷ್ಟ್ರದ ಪಶ್ಚಿಮ ಭಾಗವನ್ನು ಅದು ಒಳಗೊಂಡಿತ್ತು. ವಿಜಯನಗರದ ಸ್ಥಾಪಕರು ಕನ್ನಡಿಗರೇ ಎಂಬಲ್ಲಿ ಈಗ ಅನುಮಾನಗಳು ಉಳಿದಿಲ್ಲ. ತೆಲುಗು ಕವಿ ಶ್ರೀನಾಥನು ಎರಡನೆಯ ದೇವರಾಯನನ್ನು **'ಕರ್ನಾಟಕ ಕ್ಷಿತಿನಾಥ'**ನೆಂದೇ ಕರೆದಿದ್ದಾನೆ. ಕೃಷ್ಣದೇವರಾಯನೇ ತನ್ನನ್ನು ಸ್ವತಃ **'ಕನ್ನಡರಾಯ'** ಎಂದೇ ತನ್ನ ತೆಲುಗು ಕಾವ್ಯ **'ಅಮುಕ್ತ ಮಾಲ್ಯದ'**ದಲ್ಲಿ ಕರೆದುಕೊಂಡಿದ್ದಾನೆ. ಪೆದ್ದನ ಎಂಬ ಕವಿ ಅವನನ್ನು **"ಕನ್ನಡ ರಾಜ್ಯ ರಮಾರಮಣ"**ನೆಂದಿದ್ದಾನೆ. ವಿಜಯನಗರ ದೊರೆಗಳು ತಮ್ಮ ರುಜುವನ್ನು **"ಶ್ರೀ ವಿರೂಪಾಕ್ಷ"** ಎಂದು ಕನ್ನಡ ಲಿಪಿಯಲ್ಲಿ ಹಾಕಿಕೊಡಿದ್ದಾರೆ. ವಿಜಯನಗರ ದೊರೆಗಳಿದ್ದ **'ಕರ್ನಾಟಕ ರತ್ನ ಸಿಂಹಾಸನ'** ಇಂದಿಗೂ ಆ ದೊರೆಗಳು ಕನ್ನಡಿಗರ ಹೃದಯ ಸಿಂಹಾಸನದಲ್ಲಿ ವಿರಾಜಮಾನರಾಗಿದ್ದಾರೆ. **ಯಾವುದೇ ಅಧಿಕಾರದಾಹ, ದ್ವೇಷ, ಸ್ವಾರ್ಥ, ಮಹತ್ವಾಕಾಂಕ್ಷೆಗಳ ಉದ್ದೇಶವಿಲ್ಲದೆ ಒಂದು ಮಹಾಸಂಸ್ಕೃತಿಯ ಸಂರಕ್ಷಣೆ ಮತ್ತು ಅಭಿವೃದ್ಧಿಗಾಗಿ ಜನ್ಮ ತಾಳಿದ ವಿಶ್ವದ ಏಕೈಕ ಸಾಮ್ರಾಜ್ಯವೆಂದರೆ ವಿಜಯನಗರ ಸಾಮ್ರಾಜ್ಯ.** ಹದಿಮೂರನೇ ಶತಮಾನದ ಅಂತ್ಯದಲ್ಲಿ ದಕ್ಷಿಣ ಭಾರತಕ್ಕೆ ಧಾಳಿಯಿಟ್ಟ ಇಸ್ಲಾಮಿನಿಂದ ತತ್ತರಿಸಿದ ಭಾರತೀಯ ಸಂಸ್ಕೃತಿಯ ಸಂರಕ್ಷಣೆಗಾಗಿ ಕ್ರಿ.ಶ. ೧೩೩೬ರಲ್ಲಿ ವಿದ್ಯಾರಣ್ಯ ಮತ್ತು ಕಾಶೀವಿಲಾಸ ಕ್ರಿಯಾ ಶಕ್ತಿಯರ ಆಶೀರ್ವಾದವನ್ನು ಹೊತ್ತು ಹಕ್ಕ ಬುಕ್ಕರು ಸಾಮ್ರಾಜ್ಯವನ್ನು ಸ್ಥಾಪಿಸಿದರು. ಬುಕ್ಕನ ಕಾಲದಲ್ಲಿ (ಕ್ರಿ.ಶ. ೧೩೭೦) ಸಾಯಣ ಮತ್ತು ಮಾಧವರಿಂದ ವೇದಗಳಿಗೆ ಭಾಷ್ಯವು ರಚನೆಯಾಯಿತು. ಅವನ ಶ್ರವಣಬೆಳ್ಗೊಳ ಶಾಸನವು ಜೈನಧರ್ಮ ವೈಷ್ಣವ ಧರ್ಮಗಳಿಗೆ ಭೇದವಿಲ್ಲವೆಂದು ಸಾರುತ್ತದೆ. ಅವನಿಗೆ ಸಿಂಹಳದ ದೊರೆ ಕಾಣಿಕೆ ಕಳಿಸಿಕೊಟ್ಟನು. ಚೀನಾಕ್ಕೆ ಬುಕ್ಕನ ರಾಯಭಾರಿಗಳು ಹೋಗಿದ್ದರು. ಇಮ್ಮಡಿ ಹರಿಹರ (ಕ್ರಿ.ಶ. ೧೩೭೪)

ತಮಿಳುನಾಡಿನ ಮಧುರೆ ಸುಲ್ತಾನನ್ನು ಸೋಲಿಸಿದನು. ಮೊದಲ ದೇವರಾಯನ ಕಾಲದಲ್ಲಿ (ಕ್ರಿ.ಶ. ೧೪೧೦) ತುಂಗಭದ್ರೆಯಿಂದ ರಾಜಧಾನಿಗೆ ನೀರು ಸರಬರಾಜು ವ್ಯವಸ್ಥೆಯಾಯಿತು. ಇಮ್ಮಡಿ ದೇವರಾಯನ ಕಾಲದಲ್ಲಿ (ಕ್ರಿ.ಶ. ೧೪೩೦) ವೀರಶೈವ ಸಾಹಿತ್ಯ ವಿಶೇಷವಾಗಿ ಬೆಳೆಯಿತು. ಅವನು ಮುಸಲ್ಮಾನರಿಗೆ ರಾಜಧಾನಿಯಲ್ಲಿ ಮಸೀದಿ ಕಟ್ಟಿಸಿದ್ದನು. ಅವನ ದಂಡಾಧಿಪತಿ ಮುಳಬಾಗಿಲಿನ ಲಕ್ಕಣ್ಣದಂಡೇಶನು ನೌಕಾಬಲದ ಸಹಾಯದಿಂದ ಸಿಂಹಳದ ದೊರೆಯನ್ನು ಸೋಲಿಸಿದ. ಕೃಷ್ಣದೇವರಾಯನ ಕಾಲದಲ್ಲಿ (ಕ್ರಿ.ಶ. ೧೫೨೦) ವಿಜಯನಗರದ ಸಾಮ್ರಾಜ್ಯ ವೈಭವದ ತುದಿಯನ್ನು ಕಂಡಿತು. ಅವನು ಒರಿಸ್ಸಾದ ಗಜಪತಿಯನ್ನು ಸೋಲಿಸಿದ. ಅವನು ಸಾಹಿತ್ಯ, ಕಲೆಗಳ ಆರಾಧಕನಾಗಿದ್ದ. ಕ್ರಿ.ಶ. ೧೫೬೫ರಲ್ಲಿ ನಡೆದ ರಕ್ಕಸತಂಗಡಿ ಯುದ್ಧದಲ್ಲಿ (ರಕ್ಕಸಗಿತಂಗಡಗಿ ಗ್ರಾಮಗಳ ಮಧ್ಯೆ) ವಿಜಯನಗರ ಸಾಮ್ರಾಜ್ಯವು ಕೊನೆಗೊಂಡಿತು.

### ಹಂಪೆ

ಹಲವಾರು ಪ್ರವಾಸಿಗಳು ವಿಜಯನಗರವನ್ನು ವರ್ಣಿಸಿದ್ದಾರೆ. ಇಡೀ ವಿಶ್ವದಲ್ಲಿ ಅಂದು ಅಂತಹ ನಗರವಿರಲಿಲ್ಲ. ಸೈನ್ಯದಲ್ಲಿ ಹನ್ನೊಂದು ಲಕ್ಷ ಯೋಧರಿದ್ದರು. ಬೀದಿ ಬೀದಿಗಳಲ್ಲಿ ಮುತ್ತು ರತ್ನಗಳ ವ್ಯಾಪಾರ ನಡೆಯುತ್ತಿತ್ತು. ಗುಲಾಬಿ ಎಂದರೆ ಅಲ್ಲಿನ ಜನಕ್ಕೆ ಹಿಗ್ಗು. ಬೇರೆ ದೇಶಗಳೊಡನೆ ಹಡಗಿನ ಮೂಲಕ ವ್ಯಾಪಾರ ನಡೆಯುತ್ತಿತ್ತು. ಅಂತಹ ಹಂಪೆ ಹಾಳಾದುದನ್ನು **"ಜಗತ್ತಿನ ಇತಿಹಾಸದಲ್ಲಿ ಅಂತಹ ಸುಂದರ ನಗರದ ಮೇಲೆ ನಡೆದ ಆ ಪ್ರಮಾಣದ ಧ್ವಂಸ ಕಾರ್ಯ ಮತ್ತೊಂದು ನಗರದ ಮೇಲೆ ನಡೆದಿಲ್ಲ"**ವೆಂದು ಇತಿಹಾಸಕಾರರು ಉದ್ಗರಿಸಿದ್ದಾರೆ. ಹಂಪೆ ಕನಿಷ್ಠ ಆರು ತಿಂಗಳು ಉರಿದು "ಹಾಳು" ಹಂಪೆಯಾಯಿತು.

ಹಂಪೆಯಲ್ಲಿ ಶ್ರೀ ವಿರೂಪಾಕ್ಷನ ಗುಡಿ, ವಿಜಯವಿಠಲ ಸ್ವಾಮಿ ದೇವಾಲಯ, ಉಗ್ರ(ಲಕ್ಷ್ಮಿ) ನರಸಿಂಹ, ಕೋಟೆ ಪ್ರದೇಶ ಇಂತಹ ಹಲವಾರು ಜಾಗಗಳು ನೋಡಬೇಕಾದವು ಎಂದು ಹೇಳಿದರೆ ಸಾಲದು. ಎರಡು ದಿನ ಅಲ್ಲೇ ತಂಗಿ ಓಡಾಡಿ ನೋಡಬೇಕಾದ ನೂರಾರು ಜಾಗಗಳಿವೆ ಎಂದೇ ಹೇಳಬೇಕು. ಕನ್ನಡಿಗರ ಅಧಿದೈವ ಭುವನೇಶ್ವರಿದೇವಿಯ ಪ್ರತಿಮೆಯು ವಿರೂಪಾಕ್ಷಸ್ವಾಮಿಯ ಎಡಭಾಗದ ಗರ್ಭಗುಡಿಯಲ್ಲಿದೆ. ಹಂಪೆ ಕನ್ನಡದ ಹೆಮ್ಮೆಯ ಹಲವು ಹರಿದಾಸರ ನೆಲೆವೀಡು, ಪ್ರಾಕೃತಿಕ ಸೌಂದರ್ಯ, ಸಾಂಸ್ಕೃತಿಕ ಸಂಪತ್ತು ಎರಡರ ದೃಷ್ಟಿಯಿಂದಲೂ ಹಂಪೆಯನ್ನು ಹೋಲುವ ಜಾಗ ವಿಶ್ವದಲ್ಲೇ ಮತ್ತೊಂದಿಲ್ಲ.

ವಿಜಯನಗರದ ಪತನದೊಂದಿಗೆ ಕನ್ನಡಿಗರ ಸ್ವಾಭಿಮಾನದ ಪತನವೂ ಆರಂಭವಾಯ್ತು. ೧೫೬೫ರಲ್ಲಿ ಬಿದ್ದ ಪೆಟ್ಟಿನಿಂದ ಕ್ರಿ.ಶ. ೧೯೫೬ರಲ್ಲೂ ಕನ್ನಡಿಗ ಚೇತರಿಸಿಕೊಳ್ಳಲಾಗಿಲ್ಲ. ಒಂದೂ ಆಳಿಕೆ, ವೈಭವ, ಸಾಹಸಿ ಪ್ರವೃತ್ತಿ ಇವು ಹೋಗಿ ಕನ್ನಡಿಗರು ಹರಿದು ಹಂಚಾದರು. ಬೇರೆ ಭಾಷೆಯ ಜನ ಕರ್ನಾಟಕದ ಒಳಕ್ಕೆ ನುಗ್ಗಿದರು. ಅವರಿಂದಾಗಿ ಗಡಿ ಕನ್ನಡಿಗರು ಅವರ ಭಾಷೆಯನ್ನೇ ಕಲಿತರು. ಅದೊಂದು ಕರುಣಾಜನಕ ಕತೆ. ಆ ಕತೆ ನಾವು ಸಿಡಿದೆದ್ದು ಕಾರ್ಯೋನ್ಮುಖರಾಗಲು ಒಂದು ಕಿಡಿಯಾಗಿ ಪರಿಣಮಿಸಬೇಕು.

### ಮುಸ್ಲಿಮ್ ದೊರೆಗಳು

ವಿಜಯನಗರದ ಉತ್ತರಕ್ಕೆ ಇದ್ದ ದೆಹಲಿ ಸುಲ್ತಾನರ ಆಡಳಿತಕ್ಕೆ ಒಳಪಟ್ಟ ಕರ್ನಾಟಕ, ಮಹಾರಾಷ್ಟ್ರ, ಆಂಧ್ರಪ್ರದೇಶ ಆಡಳಿತ ನಡೆಸುತ್ತಿದ್ದ ಅಲ್ಲಾವುದ್ದೀನ್ ಎಂಬ ಸುಲ್ತಾನನ ಅಧಿಕಾರಿ (ಗವರ್ನರ್) ೧೩೪೭ರಲ್ಲಿ ದೆಹಲಿ ಸುಲ್ತಾನರ ವಿರುದ್ಧ ಬಂಡೆದ್ದು ಬಹಮನಿ ರಾಜ್ಯವನ್ನು ಗುಲ್ಬರ್ಗದಿಂದ ಆರಂಭಿಸಿದ. ೧೪೨೭ರಲ್ಲಿ ಇದರ ರಾಜಧಾನಿ ಬೀದರ್‌ಗೆ ವರ್ಗಾವಣೆಯಾಯಿತು. ಇವರ ಕಾಲದಲ್ಲಿ ಇಸ್ಲಾಂ ಕರ್ನಾಟಕದಲ್ಲಿ ವಿಶೇಷತಃ ಉತ್ತರದ ಜಿಲ್ಲೆಗಳಲ್ಲಿ ಬಲವಾಗಿ ನೆಲೆಯೂರಿತು. ಉರ್ದು ಸಾಹಿತ್ಯ ಬೆಳೆಯಿತು. ಗುಲ್ಬರ್ಗ ಕೋಟೆ, ಅಲ್ಲಿಯ ಭವ್ಯ ಜಾಮಿಯಾ ಮಸೀದಿ, ಬೀದರ್‌ನ ಗವಾನನ ಮುದ್ರಸಾ (ಶಾಲೆ) ಕಟ್ಟಡ, ಬೀದರ್‌ನ ಕೋಟೆ, ಅದರ ಒಳಗಿನ ಸೋಲಾಖಾಂಬ್ ಮಸೀದಿ, ಹಲವು ಅರಮನೆಗಳು ಹಾಗೂ ಬೀದರ್ ಬಳಿಯ ಅಷ್ಟೂರಿನ ಅರಸರ ಸುಂದರ ಸಮಾಧಿಗಳು ಇವರ ಗಣ್ಯ ಕೊಡುಗೆಗಳು. ಬಂದೇನವಾಜ್ ಎಂಬ ಸೂಫಿ ಸಂತನ ಘನ ಸಮಾಧಿ ಗುಲ್ಬರ್ಗದಲ್ಲಿ ಇದ್ದು ಆತ ಉರ್ದು ಭಾಷೆಯಲ್ಲಿ ಸಾಹಿತ್ಯ ರಚನೆ ಮಾಡಿದ.

ಈ ರಾಜ್ಯವು ೧೫ನೆಯ ಶತಮಾನದ ಕೊನೆಗೆ ಒಡೆದು ಐದು ಮುಸ್ಲಿಂ ರಾಜ್ಯಗಳು ಉದಯಿಸಿದವು. ಅವುಗಳಲ್ಲಿ ವಿಜಾಪುರದ ಆದಿಲ್‌ಶಾಹಿಗಳು (೧೪೮೯-೧೬೮೬) ಖ್ಯಾತರಾಗಿದ್ದು ಅವರ ಕಾಲದ ಇಬ್ರಾಹಿಂ ರೋಜಾ, ಗೋಲಗುಂಬಜ್‌ನಂಥ ಪ್ರಸಿದ್ಧ ಕಟ್ಟಡಗಳಿವೆ. ಇಬ್ರಾಹಿಂ ರೋಜಾ ಕಟ್ಟಿಸಿದ ಎರಡನೆಯ ಇಬ್ರಾಹಿಂ (೧೫೮೦-೧೬೨೭) ಸಂಗೀತ ಪ್ರಿಯನಾಗಿದ್ದು ಹಿಂದೂ ಸಂಗೀತವನ್ನು ಮುಸಲ್ಮಾನರಿಗೆ ತಿಳಿಸಲು ಕಿತಾಬ್-ಎ-ನವರಸ್ ಎಂಬ ಒಂದು ಕಿರು ಕೃತಿಯನ್ನು ರಚಿಸಿದನು. ಇದು ಸರಸ್ವತಿ, ಗಣಪತಿ, ಭೈರವ (ಈಶ್ವರ) ಮುಂತಾದವರ ಸ್ತುತಿಗಳನ್ನು ಒಳಗೊಂಡಿದೆ. ವಿಜಾಪುರದ ಅರಸರು ಚಿತ್ರಕಲೆಗೂ ವಿಶೇಷ ಪ್ರೋತ್ಸಾಹ ಕೊಟ್ಟಿದ್ದರು. ಇತಿಹಾಸಕಾರ ಫರಿಸ್ತಾ ಇವರ ಆಸ್ಥಾನದಲ್ಲಿ ಇದ್ದ. ಗೋಲಗುಂಬಜವು ಭಾರತದಲ್ಲಿ ಅತ್ಯಂತ ದೊಡ್ಡ ಹಾಗೂ ಜಗತ್ತಿನಲ್ಲಿ ನಾಲ್ಕನೆಯದಾದ ಹಿರಿಯ ಗುಮ್ಮಟವನ್ನು ಹೊಂದಿದ್ದು ಅದರ ಒಳಗಡೆ ಇರುವ **'ಪಿಸುಗುಟ್ಟುವ ಮೊಗಸಾಲೆ'** (ವಿಸ್ಪರಿಂಗ್ ಗ್ಯಾಲರಿ) ಒಂದು ಜಾಗತಿಕ ಅದ್ಭುತ. ವಿಜಾಪುರದವರು ದಕ್ಷಿಣಕ್ಕೆ ದಂಡೆತ್ತಿ ಬಂದು ಅಲ್ಲಿನ ವಿಜಯನಗರದ ಪಾಳೇಯಗಾರರನ್ನು





ಸೋಲಿಸಿ ಅವರಿಂದ ಕಪ್ಪ ಸಂಗ್ರಹಿಸಿ ಬೆಂಗಳೂರನ್ನು ಶಿವಾಜಿಯ ತಂದೆ ಏಕೋಜಿಗೆ ಜಾಗೀರಾಗಿ ಕೊಟ್ಟರು. ವಿಜಯನಗರದ ಮಾಂಡಳಿಕರಾಗಿದ್ದು ಬೆಂಗಳೂರಿನಲ್ಲಿ ಕೋಟೆ ಕಟ್ಟಿದ್ದ (೧೫೩೭) ಕೆಂಪೇಗೌಡ ಮನೆತನದವರು ಬೆಂಗಳೂರಿನಲ್ಲಿ ಅಲಸೂರು ಸೋಮೇಶ್ವರ, ಬಸವನಗುಡಿ ಕಟ್ಟಿಸಿ ಗವಿಗಂಗಾಧರ ದೇವಾಲಯವನ್ನು ವಿಸ್ತರಿಸಿದ್ದರು. ಕೆಂಪೇಗೌಡನ ವಂಶಸ್ಥರು ಬೆಂಗಳೂರನ್ನು ತ್ಯಜಿಸಿ ಮಾಗಡಿಗೆ ಹೋಗುವಂತೆ ವಿಜಾಪುರದವರು (೧೬೩೮) ಮಾಡಿದರು. ೧೬೮೬ರಲ್ಲಿ ವಿಜಾಪುರವನ್ನು ಮೊಗಲರು ಗೆದ್ದು ವಿಜಾಪುರದ ರಾಜ್ಯ ಕೊನೆಗೊಳಿಸಿದರು. ಮೊಗಲರು ದಕ್ಷಿಣಕ್ಕೆ ಬೆಂಗಳೂರಿಗೆ ಬಂದು ಘಟ್ಟವಿಳಿದು ಅರ್ಕಾಟಿನಲ್ಲಿ ಒಬ್ಬ ಅಧಿಕಾರಿಯನ್ನೂ (ನವಾಬ) ಹೈದರಾಬಾದ್‌ನಲ್ಲಿ ಒಬ್ಬ ಸುಬೇದಾರ(ನಿಜಾಮ)ನನ್ನೂ ನೇಮಿಸಿದನು.

### ಕೆಳದಿ-ಮೈಸೂರು ಅರಸರು

ವಿಜಯನಗರ ಪತನವಾಗಿ (೧೫೬೫) ರಾಜಧಾನಿಯು ಕ್ರಮವಾಗಿ ಪೆನುಗೊಂಡ, ಚಂದ್ರಗಿರಿ, ವೆಲ್ಲೂರುಗಳಿಗೆ ಸ್ಥಳಾಂತರಗೊಂಡಾಗ ವಿಜಯನಗರದ ಮಾಂಡಳಿಕರಾಗಿದ್ದ ಹಲವಾರು ಮನೆತನಗಳು ಸ್ವತಂತ್ರವಾದವು. ಅವರಲ್ಲಿ ಕೆಳದಿ, ಮೈಸೂರು, ಚಿತ್ರದುರ್ಗಗಳು ಮುಖ್ಯವಾಗಿದ್ದು ಚಿತ್ರದುರ್ಗದ ಕೋಟೆಯ ಮೇಲೆ ಹೇಳಿದ ಕೊನೆಯ ಪಾಳೆಯಗಾರರ ಗಣ್ಯ ಸ್ಮಾರಕವಾಗಿದೆ. ಕೆಳದಿ ಅರಸರು ತಮ್ಮ ವಿದೇಶೀ ವಾಣಿಜ್ಯದಿಂದ ಅಪಾರ ಸಂಪತ್ತು ಗಳಿಸಿದ್ದು ಶಿವಪ್ಪನಾಯಕ (೧೬೪೫-೬೦) ತನ್ನ **'ಸಿಸ್ತು'** ಎಂಬ ಹೊಸ ಭೂಕಂದಾಯ ವ್ಯವಸ್ಥೆಯಿಂದ ಪ್ರಖ್ಯಾತನಾಗಿದ್ದಾನೆ. ಕೆಳದಿಯ ಚೆನ್ನಮ್ಮಾಜಿಯು ಮೊಗಲರ ಸೈನ್ಯದ ಕಾಟಕ್ಕೆ ಒಳಪಟ್ಟಿದ್ದ ಶಿವಾಜಿಯ ಮಗ ಛತ್ರಪತಿ ರಾಜಾರಾಮನಿಗೆ ಆಶ್ರಯ ನೀಡಿ ಪ್ರಸಿದ್ಧಳಾಗಿದ್ದಾಳೆ. ೧೭೬೩ರಲ್ಲಿ ಮೈಸೂರಿನ ಹೈದರ್ ಕೆಳದಿ ರಾಜ್ಯವನ್ನು ಗೆದ್ದುಕೊಂಡ.

ಮೈಸೂರು ಅರಸರು (೧೩೯೯-೧೯೪೭) ವಿಜಯನಗರದ ಪಾಳೆಯಗಾರರಾಗಿದ್ದು ರಾಜ ಒಡೆಯನು ೧೬೧೦ರಲ್ಲಿ ಶ್ರೀರಂಗಪಟ್ಟಣವನ್ನು ವಿಜಯನಗರದಿಂದ ಗೆದ್ದು ಅದನ್ನೇ ರಾಜಧಾನಿಯಾಗಿ ಮಾಡಿಕೊಂಡು ಸಾಮ್ರಾಜ್ಯದ ವಿರುದ್ಧ ಬಂಡಾಯ ಆರಂಭಿಸಿದ. ಮುಂದೆ ಸ್ವತಂತ್ರವಾದ ಮೈಸೂರಲ್ಲಿ ಕಂಠೀರವ ನರಸರಾಜ (೧೬೩೮-೫೯), ಚಿಕ್ಕದೇವರಾಜ (೧೬೭೩-೧೭೦೪) ಮುಂತಾದ ಗಣ್ಯ ಅರಸರು ಆಳಿದರು. ಚಿಕ್ಕದೇವರಾಜ ಬೆಂಗಳೂರನ್ನು ಮೊಗಲರಿಂದ ಗುತ್ತಿಗೆಗೆ ಪಡೆದು ಅಲ್ಲಿ ಕೋಟೆ ವೆಂಕಟರಮಣಸ್ವಾಮಿ ಮಂದಿರ ಕಟ್ಟಿಸಿದ. ತಿರುಮಲಾರ್ಯ, ಸಿಂಗರಾರ್ಯ, ಸಂಚಿಯ ಹೊನ್ನಮ್ಮ - ಇವನ ಆಸ್ಥಾನದಲ್ಲಿ ಇದ್ದ ಕವಿಗಳು.

### ಹೈದರ್-ಟಿಪ್ಪು

ಹೈದರ್‌ಅಲಿ (೧೭೬೧-೮೨) ಮೈಸೂರು ಅರಸರ ದುರ್ಬಲಸ್ಥಿತಿಗತಿಯ ಲಾಭ ಪಡೆದು ತಾನೇ ಅಧಿಕಾರ ನಿರ್ವಹಿಸಿದ. ಆದರೆ ವಿಜಯನಗರದ ಪಾಳೆಯಗಾರರಾಗಿದ್ದು ಮುಂದೆ ಸ್ವತಂತ್ರರಾದ ಅನೇಕ ಪಾಳೆಯಗಾರರ ಆಳ್ವಿಕೆಯನ್ನು (ಚಿತ್ರದುರ್ಗ, ರಾಯದುರ್ಗ, ಕೆಳದಿ, ಸೋಂದಾ ಇತ್ಯಾದಿ) ಕೊನೆಗೊಳಿಸಿ ಕರ್ನಾಟಕದ ಏಕೀಕರಣದ ಸಾಧನೆಗೆ ಆತ ತನ್ನದೇ ಆದ ರೀತಿಯ ಕೊಡುಗೆ ನೀಡಿದ. ಬ್ರಿಟಿಷರ ವಿರುದ್ಧ ಹೈದರ್ ಮತ್ತು ಟಿಪ್ಪು ನಡೆಸಿದ ಹೋರಾಟಗಳಿಂದ ಮೈಸೂರು ಜಾಗತಿಕ ಕೀರ್ತಿ ಪಡೆಯಿತು. ಕೈಗಾರಿಕೆ, ವಾಣಿಜ್ಯಗಳನ್ನು ಸುಧಾರಿಸಬೇಕೆಂದು ಟಿಪ್ಪುವಿನ ತೀವ್ರ ಪ್ರಯತ್ನದ ಫಲವಾಗಿ ರೇಷ್ಮೆ ವ್ಯವಸಾಯ ಕರ್ನಾಟಕಕ್ಕೆ ಬಂತು. ಟಿಪ್ಪುವನ್ನು ಬ್ರಿಟಿಷರು ಸೋಲಿಸಿ ೧೭೯೯ರಲ್ಲಿ ರಾಜ್ಯವನ್ನು ಮೈಸೂರು ಅರಸು ವಂಶಕ್ಕೆ ಕೊಟ್ಟರು.

### ಆಧುನಿಕ ಮೈಸೂರು

ಮೈಸೂರು ಅರಸರು ಕರ್ನಾಟಕದ ಸಾಹಿತ್ಯ, ಕಲೆ, ಸಂಸ್ಕೃತಿ, ಅರ್ಥ ವ್ಯವಸ್ಥೆಗಳ ಪ್ರಗತಿಗೆ ಹಲವು ರೀತಿಯ ಕೊಡುಗೆ ನೀಡಿದರು. ಮುಮ್ಮಡಿ ಕೃಷ್ಣರಾಜ ಒಡೆಯರು (೧೭೯೯-೧೮೩೧) ಚಾಮರಾಜ ಒಡೆಯರು (೧೮೮೧-೯೪), ನಾಲ್ವಡಿ ಕೃಷ್ಣರಾಜ ಒಡೆಯರು (೧೯೦೨-೧೯೪೦) ಸ್ಮರಣೀಯ ಸಾಧನೆಗಳಿಂದ ಪ್ರಸಿದ್ಧರಾದರು. ದಿವಾನರುಗಳಾಗಿದ್ದ ರಂಗಚಾರ್ಲು, ಶೇಷಾದ್ರಿ ಅಯ್ಯರ್, ಎಂ. ವಿಶ್ವೇಶ್ವರಯ್ಯ ಹಾಗೂ ಮಿರ್ಜಾ ಇಸ್ಮಾಯಿಲ್ ದೂರಗಾಮಿಯಾದ ತಮ್ಮ ಆಡಳಿತದಿಂದ ಪ್ರಸಿದ್ಧರಾದರು. ವಾಣಿವಿಲಾಸ ಸಾಗರ, ಕನ್ನಂಬಾಡಿ ಆಣೆಕಟ್ಟು ಅನೇಕ ಸರಕಾರೀ ಕ್ಷೇತ್ರದ ಉದ್ದಿಮೆಗಳು (ಭದ್ರಾವತಿ ಕಬ್ಬಿಣ ಕಾರ್ಖಾನೆ, ಗಂಧದೆಣ್ಣೆ ಕಾರ್ಖಾನೆ, ಸಾಬೂನು ಕಾರ್ಖಾನೆ, ವಿದ್ಯುತ್ ಕಾರ್ಖಾನೆ, ಮಂಡ್ಯ ಸಕ್ಕರೆ ಕಾರ್ಖಾನೆ ಇತ್ಯಾದಿ) ಈ ಕಾಲದಲ್ಲಿ ಬೆಳೆದವು. ಮೈಸೂರು ವಿಶ್ವವಿದ್ಯಾಲಯವೂ (೧೯೧೬) ಕನ್ನಡ ಸಾಹಿತ್ಯ ಪರಿಷತ್ತು (೧೯೧೫) ಸ್ಥಾಪನೆಗೊಂಡವು. ಆ ಕಾಲದ ಕನ್ನಡ ಪರ ಚಟುವಟಿಕೆಗಳ ಮುಂಚೂಣಿಯಲ್ಲಿ ಇದ್ದ ಮೈಸೂರು ಸಂಸ್ಥಾನದ ಬಿ.ಎಂ.ಶ್ರೀ, ಡಿ.ವಿ.ಜಿ., ಎಚ್.ವಿ. ನಂಜುಂಡಯ್ಯ, ಕರ್ಪೂರ ಶ್ರೀನಿವಾಸರಾವ್ ಹಾಗೂ ಸಂಸ್ಥಾನದ ಹೊರಗಿನ ಆಲೂರು ವೆಂಕಟರಾವ್, ಮುದವೀಡು ಕೃಷ್ಣರಾವ್, ಬೆನಗಲ್ ರಾಮರಾವ್, ಪಂಜೆ ಮಂಗೇಶರಾವ್ ಮುಂತಾದವರೂ ಪರಿಷತ್ತಿನ ಚಟುವಟಿಕೆಯಲ್ಲಿ ಆರಂಭದಿಂದ ನಾಡ ಏಕೀಕರಣಕ್ಕೆ ಬೇಕಾದ ಭದ್ರಪಾಯವನ್ನು ರಚಿಸಿದರು.

●



# ಕನ್ನಡದ ಹಿತ*

- ಡಾ. ಯು. ಆರ್. ಅನಂತಮೂರ್ತಿ
ಜ್ಞಾನಪೀಠ ಪುರಸ್ಕೃತರು
೪೯೮, 'ಅಭಯ' ತೊಣಚಿಕೊಪ್ಪಲು ಬಡಾವಣೆ,
ಮೈಸೂರು-೫೭೦ ೦೦೯

ಕರ್ನಾಟಕದಲ್ಲಿ ಆಡಳಿತಗಾರರಾಗಬೇಕಾದರೆ, ಉದ್ಯಮಶೀಲರಾಗಬೇಕಾದರೆ ಅವರೆಲ್ಲರೂ ಕನ್ನಡ ಕಲಿತಿರಬೇಕು. ಮೂರ್ಖನಲ್ಲದ ಪ್ರತಿ ಮನುಷ್ಯನೂ ತಾನು ಯಾರೊಡನೆ ಕೆಲಸ ಮಾಡಬೇಕೊ ಅವರ ಭಾಷೆಯನ್ನು ಕಲಿತಿರುತ್ತಾನೆ. ಕೆಲವು ವರ್ಷ ಮಾತ್ರ ಇಲ್ಲಿ ಬಂದಿರುವವರಿಗೆ ಕನ್ನಡ ಗೊತ್ತಿಲ್ಲದಿರುವುದು ತೊಡಕಾದರೆ, ಇಲ್ಲೇ ನೆಲಸುವವರಿಗೆ ಕನ್ನಡ ಗೊತ್ತಿಲ್ಲದಿರುವುದು ಕಂಟಕ ಪ್ರಾಯ. ಅಥವಾ ನಾವು, ಕನ್ನಡದ ಜನ, ಇಂಗ್ಲೀಷ್ ಭಾಷೆಯ ದ್ವೀಪಗಳನ್ನು ಸೃಷ್ಟಿಸಿ, ಆ ದ್ವೀಪಗಳಲ್ಲಿ ನಮ್ಮ ವರ್ಗದ ಈ ಜನರನ್ನು ಸಹಪ್ರಜೆಗಳಾಗಿ ಮಾಡಿಕೊಂಡು, ಒಂದು ಕೃತಕ ವಲಯ ಸೃಷ್ಟಿಸಿಕೊಂಡಿರುವುದರಿಂದ ಕೆಲವು ಕಾಲ ಇದು ಸಹ್ಯವಾಗಿರುತ್ತದೆ. ಆದರೆ ಹೀಗೆ ಬದುಕುವವರು ಸಾಂಸ್ಕೃತಿಕವಾಗಿ ಸೊರಗುತ್ತ ಹೋಗುತ್ತಾರೆಂಬುದು ನಿಜ.

ಕನ್ನಡದ ಅಭಿಮಾನ ನಮ್ಮೆಲ್ಲರನ್ನೂ ಇಲ್ಲಿ ಒಟ್ಟಿಗೆ ತಂದಿದೆ. ರಾಜಕೀಯ, ಸಾಹಿತ್ಯ ಮುಂತಾದ ವಿಷಯಗಳಲ್ಲಿ ಮಾತ್ರವಲ್ಲದೆ ನಮ್ಮ ನಾಡು ನುಡಿಗಳ ಹಿತರಕ್ಷಣೆಗೆ ಏನನ್ನು ಮಾಡುವುದು ಈಗ ಅಗತ್ಯ ಎಂಬ ವಿಷಯದಲ್ಲೂ ಭಿನ್ನ ನಿಲುವುಗಳು ಇರಬಹುದಾದ ಜನ ಇಲ್ಲಿ ಸೇರಿದ್ದೇವೆ. ನಮ್ಮನ್ನು ಹೀಗೆ ಒಂದೇ ವೇದಿಕೆಯ ಮೇಲೆ ತಂದಿರುವ ಕನ್ನಡದ ಅಭಿಮಾನ ಶಿವಸೇನೆಯ ಮಾದರಿಯದಾಗಲಾರದು. ಯಾಕೆಂದರೆ ಈ ಅಭಿಮಾನದ ಹಿಂದಿರುವ ಆತಂಕ ಯಾವ ಬಗೆಯದು, ಅದರ ಭರವಸೆಯ ಸ್ವರೂಪವೇನು ಎಂಬುದನ್ನು ಚಿಂತಿಸುವುದು, ವಿವರಿಸುವುದು ಆಗ ಅಗತ್ಯವಾಗುತ್ತಿರಲಿಲ್ಲ. ಅದಕ್ಕೆ ಅವಕಾಶವೂ ಇರುತ್ತಿರಲಿಲ್ಲ. ಶಿವಸೇನೆಯ ರೀತಿಯ ಉಗ್ರಗಾಮೀ ಚಳವಳಿಗಳು ಮಾತ್ರ ಯಶಸ್ವಿಯಾಗುತ್ತಿರುವಂತೆ ಕಾಣಲುತೊಡಗಿರುವ ಈ ನಮ್ಮ ದುಷ್ಟಕಾಲದಲ್ಲಿ, ಕ್ರೌರ್ಯ ಮತ್ತು ಅಸಹನೆಗಳಿಂದ ಬಲಾತ್ಕಾರವಾಗಿ ಬಯಸಿದ್ದನ್ನು ಪಡೆಯುವ ಪ್ರಲೋಭನೆ ಬಿಟ್ಟು, ತತ್ಕಾಲದ ಗೆಲುವಿನಿಂದ ಮರುಳಾಗದೆ, ಶಾಶ್ವತವಾದ ಸತತವಾದ ನೆಲೆಯೊಂದನ್ನು ಕನ್ನಡದ ನಮ್ಮ ಜನಕ್ಕೆ ಭಾರತ ಸಂವಿಧಾನದ ಚೌಕಟ್ಟಿನಲ್ಲೇ, ಭಾರತದ ಭಾಷೆಗಳ ನಡುವೆ ವೈರ ಬೆಳೆಯದಂತೆ ಯಾವ ಕಾರಣಕ್ಕಾಗಿ ಯಾವ ಮಾರ್ಗದಲ್ಲಿ ನಾವು ಕಂಡುಕೊಳ್ಳಬಹುದೆಂಬುದನ್ನು ಚಿಂತಿಸಲು ನಾವಿಲ್ಲಿ ವಿಭಿನ್ನ ಮತೀಯರು ಸೇರಿರುವುದೇ ಕನ್ನಡ ಚಳವಳಿಯ ವಿಶೇಷವೆಂದು ನಾನು ಗ್ರಹಿಸುತ್ತೇನೆ. ಸಮೂಹ ಸನ್ನಿಯಲ್ಲಿ ತಲೆಕೆಟ್ಟವನಂತೆ ಕಿರುಚುವವನಿಗೆ ವಿಚಾರದ ಅಗತ್ಯವಿಲ್ಲ; ಆದರೆ ನಮಗೆ ಇದೆ. ಶಿವಸೇನೆಯಂತಹ ಸಂಸ್ಥೆಗಳ ಹಿಂದೆ ಮಹಾರಾಷ್ಟ್ರದ ಅತ್ಯುತ್ತಮ ಲೇಖಕರು ಇಲ್ಲ; ತಮಿಳುನಾಡಿನ ದ್ರಾವಿಡತತ್ವ ತೀಟೆಯ ಮಾತುಗಾರಿಕೆಯಾಗಿ ಮಾತ್ರ ಬೆಳೆಯಿತು - ತಮಿಳಿನ ಸೂಕ್ಷ್ಮಜ್ಞ ಬರಹಗಾರರು ಅದರಿಂದ ಹೊರಗುಳಿದರು. ಪಂಜಾಬಿನ, ಕಾಶ್ಮೀರದ, ಅಸ್ಸಾಮಿನ ಉಗ್ರಗಾಮಿಗಳು, ಶ್ರೀಲಂಕೆಯ ತಮಿಳು ಹುಲಿ ಉಗ್ರಗಾಮಿಗಳು ವಿದೇಶಿ ಶಸ್ತ್ರಾಸ್ತ್ರಗಳಿಂದ, ಮಾರಕ ಡ್ರಗ್ಗಿನ ಕಪ್ಪು ಹಣದಿಂದ ಮಾನವೀಯತೆಗೇ ಕಂಟಕ ಪ್ರಾಯರಾಗಿ ಬೆಳೆಯುತ್ತಿದ್ದಾರೆ. ಇವರ ರೀತಿಯ ಯಶಸ್ಸು ಕನ್ನಡದ ಚಳವಳಿಗೆ ಬೇಕಿಲ್ಲ. ಆದರೆ ಯಾವ ಅನ್ಯಾಯವನ್ನಾದರೂ ಸಹಿಸಿಕೊಳ್ಳುವ ಜನ ಕನ್ನಡಿಗರು ಎಂಬ ಕ್ಲೈಬ್ಯ ನಮಗೆ ಅಂಟುವುದೂ ಬೇಕಿಲ್ಲ. ಆದ್ದರಿಂದಲೇ ನಾವು ತಾತ್ವಿಕ ತಳಹದಿಯೊಂದರ ಮೇಲೆ, ಅಸಹನೆಯ ಚೀರಾಟ ಮತ್ತು ಕ್ರೌರ್ಯವನ್ನು ನಮ್ಮ ಹೋರಾಟದ ಕ್ರಮ ಮಾಡಿಕೊಳ್ಳದಂತೆ ಸಾತ್ವಿಕ ಕೆಚ್ಚಿನ ಕನ್ನಡತನವನ್ನು ಈ ನೆಲದಲ್ಲಿ ಸ್ಥಾಪಿಸಲು ಪ್ರಯತ್ನಿಸುತ್ತಿದ್ದೇವೆ.

ಇಂಗ್ಲೀಷ್ ಕವಿ ವಿಮರ್ಶಕ ಆರ್ನಾಲ್ಡ್ ಹೇಳುತ್ತಾನೆ : ನಮ್ಮ ನಾಡು ದೊಡ್ಡದಾಗಿರುವುದು ಕಲ್ಲಿದ್ದಲಿನ ಉತ್ಪಾದನೆಯಿಂದಲ್ಲ; ಶೇಕ್ಸ್‌ಪಿಯರಿನಿಂದಾಗಿ ಎಂದು. ಆದರ್ಶವಾಗಿ ಈ ಮಾತು ನಿಜವಾದರೂ ಆರ್ನಾಲ್ಡನ್ನು ಪಾಠ ಮಾಡುವಾಗೆಲ್ಲ ನಾನೊಂದು ಮಾತು ಹೇಳುವುದಿದೆ : "ಈ ವಾಕ್ಯವನ್ನು ಮೈಸೂರಿನಲ್ಲಿ

* ಕನ್ನಡ ಶಕ್ತಿ ಕೇಂದ್ರವು ಬೆಳಗಾವಿಯಲ್ಲಿ ಏರ್ಪಡಿಸಿದ್ದ ಮೂರನೆಯ ಮಹಾಧಿವೇಶನದಲ್ಲಿ ಮಾಡಿದ ಅಧ್ಯಕ್ಷ ಭಾಷಣ.





ಈ ಕ್ಲಾಸಲ್ಲಿ ನಾನು ಓದುತ್ತಿರುವುದಕ್ಕೆ ಕಾರಣ ೧೯ನೇ ಶತಮಾನದ ಇಂಗ್ಲೆಂಡಿಗ ಕಲ್ಲಿದ್ದಲಿನ ಬಲವಿದ್ದುದರಿಂದ. ನಾನು ಯಾಕೆ ಇಷ್ಟೇ ಉದಾತ್ತ ಧೋರಣೆಯ ಪೋರ್ಚುಗೀಸಿನ ಒಂದು ವಾಕ್ಯವನ್ನೊ, ಫ್ರೆಂಚಿನ ಒಂದು ವಾಕ್ಯವನ್ನೊ, ಜರ್ಮನ್ ಭಾಷೆಯ ಒಂದು ವಾಕ್ಯವನ್ನೊ ಓದುವುದರ ಬದಲಾಗಿ ಇಂಗ್ಲಿಷಿನ ಒಂದು ವಾಕ್ಯ ಓದುತ್ತಿದ್ದೇನೆ ಎಂಬುದರ ಹಿಂದೆ ಇರುವ ಐತಿಹಾಸಿಕ ವಾಸ್ತವವನ್ನು ನಾವು ಅರಿಯಬೇಕು."

ಒಂದು ಭಾಷೆ ಶೇಕ್ಸ್‌ಪಿಯರನನ್ನು ಪಡೆದಿದ್ದರೆ ಸಾಲದು; ಅದರ ಹಿಂದೆ ಸಂಪನ್ಮೂಲಗಳೂ ಸಾಹಸೀ ಉದ್ಯಮಶೀಲರೂ ಇರಬೇಕು. ರಾಜರಾಮ ಮೋಹನರಾಯರು ಇಂಗ್ಲೀಷ್ ಭಾಷೆ ಬೇಕೆಂದು ಕೇಳಿದಾಗ ತಂತ್ರ ಜ್ಞಾನದ ವೈಜ್ಞಾನಿಕ ಧೋರಣೆಯ ಯೂರೋಪು ನಮಗೆ ಬೇಕೆಂದು ಕೇಳಿದ್ದು. ಈ ಆಯ್ಕೆಯ ಪರಿಣಾಮವಾಗಿ ಇಂಗ್ಲೀಷ್ ಆಳ್ವಿಕೆಯ ದುರಂತವನ್ನೂ, ಅದು ತಂದ ಭರವಸೆಯನ್ನೂ ತಬ್ಬಿಬ್ಬಾಗಿ ಅನುಭವಿಸಿದ ನಾವು ಕನ್ನಡದ ಅಭಿಮಾನವೆಂದರೆ ಕೇವಲ ಸಾಂಸ್ಕೃತಿಕ ವಿಷಯವೆಂದು ತಿಳಿಯಲಾರೆವು.

ಹೀಗೆ ಸಾಂಸ್ಕೃತಿಕವಾಗಿ ಕನ್ನಡ ಭಾಷೆಯ ಬಗ್ಗೆ ನಾವು ತಾಳುವ ಅಭಿಮಾನಕ್ಕೂ, ಈ ಅಭಿಮಾನ ನೈಜವಾಗಲು ಕನ್ನಡ ಮಾತಾಡುವ ಕರ್ನಾಟಕದ ಜನ ನೆಮ್ಮದಿಯಲ್ಲಿ ಬದುಕಿ ಬೆಳೆಯಲು ಅಗತ್ಯವಾದ ಸಂಪನ್ಮೂಲಗಳನ್ನು ಪಡೆದಿರಬೇಕೆಂಬ ಕಾಳಜಿಗೂ ಅಭಿನ್ನವಾದ ಸಂಬಂಧವಿದೆ. **ಪ್ರಪಂಚದ ಕೆಲವು ಒಳ್ಳೆಯ ಬರಹಗಾರರು ಕನ್ನಡಿಗರು ; ಪ್ರಪಂಚದ ಕೆಲವು ಒಳ್ಳೆಯ *ಸಂಗೀತಗಾರರು ಕನ್ನಡಿಗರು ; ಪ್ರಪಂಚದ ಕೆಲವು ಮುಖ್ಯ ಧಾರ್ಮಿಕ ಪಂಥಗಳು ತಮ್ಮ ನೆಲೆ ಕಂಡದ್ದು ಕರ್ನಾಟಕದಲ್ಲಿ*** - ಇತ್ಯಾದಿಯಾಗಿ ಹೆಮ್ಮೆ ಪಡುವಾಗ ಕನ್ನಡಿಗರ ಜಲ ನೆಲಗಳ ಪ್ರಶ್ನೆ, ಉದ್ಯೋಗಾವಕಾಶದ ಪ್ರಶ್ನೆ, ಈಗಾಗಲೇ ಸಮರ್ಥವಾಗಿ ಬೆಳೆದ ಭಾಷೆ ನಮ್ಮ ಜ್ಞಾನಾರ್ಜನೆಯ ಭಾಷೆಯೂ ಆಗಿಲ್ಲ ಎಂಬ ಆತಂಕ ನಮ್ಮನ್ನು ಬಾಧಿಸುತ್ತದೆ. ಹೀಗೊಂದು ಸಭೆ ಸೇರಿ ಉತ್ಕೃಷ್ಟ ಸಾಹಿತ್ಯ ಕೃತಿಗಳನ್ನು ರಚಿಸುವುದೊ, ವೈಜ್ಞಾನಿಕವಾಗಿ ಸತ್ಯ ಅರಿಯುವುದೊ ಸಾಧ್ಯವಿಲ್ಲ; ಅದು ಏಕಾಂತದ ಏಕಾಗ್ರತೆಯಲ್ಲಿ ಸಾಧಿಸಬೇಕಾದ್ದು. ಆದರೆ ಹೀಗೆ ಒಟ್ಟಾಗದೆ ನಮ್ಮ ಅಸ್ತಿತ್ವಕ್ಕೇ ಮಾರಕವಾದ ಅಪಾಯಗಳನ್ನು ನಿವಾರಿಸಿಕೊಳ್ಳುವಂತಿಲ್ಲ. ಆದ್ದರಿಂದಲೇ ಕನ್ನಡದ ಬೆಳವಣಿಗೆಗೆ ಅಗತ್ಯವಾದ ಮೂರು ಸೂತ್ರಗಳು : ***ತಪಸ್ಸು, ಸಂಘಟನೆ ಮತ್ತು ಅಹಿಂಸಾತ್ಮಕ ಹೋರಾಟ - ಸಾತ್ವಿಕ ಕೆಚ್ಚಿನ ಹೋರಾಟ.***

**ಈ** ನಮ್ಮ ಯುಗದಲ್ಲಿ ಭಾರತದ ಹಲವು ಭಾಷೆಗಳ ನ್ನಾಡುವ ಜನ ತಮ್ಮ ಭಾಷೆಗಳ ಆಧಾರದ ಮೇಲೆ ತಾವೊಂದು ಸಾವಯವ ಸಂಬಂಧ ಪಡೆದ ಸಮುದಾಯವೆಂದು ತಿಳಿಯುತ್ತಲೇ ತಾವು ಭಾರತೀಯರೂ ಹೌದು ಎಂದು ತಿಳಿಯುವುದರ ಹಿಂದೆ ಯಾವ ವಿರೋಧವೂ ಇಲ್ಲ ಎನ್ನುವಾಗ ನಾವು ಕಿಂಚಿತ್ತೂ ಅಂಜಬೇಕಿಲ್ಲ. ಮಹಾತ್ಮ ಗಾಂಧಿಯವರು ಈ ಬಗ್ಗೆ ಅತ್ಯಂತ ಸ್ಪಷ್ಟ ನಿಲುವು ತಾಳಿದವರಾದ್ದರಿಂದ ಭಾಷಾವಾರು ಪ್ರಾಂತಗಳ ರಚನೆ ಸ್ವತಂತ್ರ ಭಾರತದ ಅಗತ್ಯಗಳಲ್ಲಿ ಒಂದೆಂದು ತಿಳಿದಿದ್ದರು. ಪ್ರತಿ ಭಾರತೀಯನಿಗೂ ತಾನು ಯಾರೆಂಬ ಕಲ್ಪನೆಯಲ್ಲಿರುವ ಬಹುತ್ವ ಅವಿಚ್ಛಿನ್ನವಾದ ಒಂದು ಸರಪಳಿಯಿದ್ದಂತೆ ಯೂರೋಪಿನಲ್ಲಿ ನನ್ನನ್ನು ನೀನು ಯಾರೆಂದು ಕೇಳಿದರೆ **'ನಾನು ಭಾರತೀಯ'** ಎನ್ನುತ್ತೇನೆ. ದೆಹಲಿಯಲ್ಲಿ ಇದೇ ಮಾತು ಕೇಳಿದರೆ **'ನಾನು ಕನ್ನಡಿಗ'** ಎನ್ನುತ್ತೇನೆ. ಬೆಂಗಳೂರಲ್ಲಿ ಕೇಳಿದರೆ **'ಮಲೆನಾಡಿನವನು'** ಎನ್ನುತ್ತೇನೆ. ಸ್ವಂತ ಊರಿನಲ್ಲೇ ಈ ಪ್ರಶ್ನೆ ಯಾರಾದರೂ ಕೇಳಿದಲ್ಲಿ, ನಮ್ಮ ನಮ್ಮ ಜಾತಿ, ನಮ್ಮ ಒಳ ಪಂಗಡ, ನಮ್ಮ ಮನೆತನ ಇತ್ಯಾದಿಗಳು ತನ್ನತನದ ಕುರುಹಾಗುತ್ತ ಹೋಗುತ್ತದೆ. ಪ್ರತಿ ಭಾರತೀಯನಿಗೂ, ಹೀಗೆ ಹಲವು ಕೊಂಡಿಗಳ ಸರಪಳಿಯಾದ ವಾಸ್ತವದಲ್ಲಿ ನೈಜವಾಗಿರುವ ತನ್ನತನದ ಬಹುರೂಪಿಯಾದ ಅನುಭವ ಆರೋಗ್ಯ ಸ್ಥಿತಿಯಲ್ಲಿದ್ದಾಗ ಯಾವ ಮಾರಕ ವಿರೋಧದಲ್ಲೂ ಒಂದನ್ನೊಂದು ಎದುರಿಸುವುದಿಲ್ಲ. ಅದನ್ನು ಸಹಿಷ್ಣು ಭಾರತದಲ್ಲೂ ಹೆಚ್ಚು ಸುಲಭವಾಗಿ ಸಾಧ್ಯ ಮಾಡಿದ ಸಂಸ್ಕೃತಿಯಾದರೆ ಕನ್ನಡನಾಡಿನದು. ಆದ್ದರಿಂದಲೇ ಕನ್ನಡಕ್ಕೆ ಮಹತ್ವವನ್ನು ತಂದವರಲ್ಲಿ ಮರಾಠಿ ಕನ್ನಡಿಗರು, ತಮಿಳು ಕನ್ನಡಿಗರು, ಕೊಂಕಣಿ ಕನ್ನಡಿಗರು, ತುಳು ಕನ್ನಡಿಗರು, ತೆಲುಗು ಕನ್ನಡಿಗರು, ಕೊಡವ ಕನ್ನಡಿಗರು, ಉರ್ದು ಕನ್ನಡಿಗರು, ಮಲಯಾಳಿ ಕನ್ನಡಿಗರು - ಹೀಗೆ ಹಲವರಿದ್ದಾರೆ. ಕನ್ನಡನಾಡಿನ ಸಂಸ್ಕೃತಿ ಮತ್ತು ಜೀವನ ಕ್ರಮ ಇಂಗ್ಲೀಷ್ ಭಾಷೆಯ ಸಾಹಿತ್ಯಕ್ಕೂ ಬೆಲೆಯುಳ್ಳ ಕೃತಿಗಳನ್ನು ಸೇರಿಸಿವೆ. ರಾಜಾರಾಯರು ಮತ್ತು ನಾರಾಯಣ್ ಬರೆದದ್ದು ಕನ್ನಡದಿಂದ ಇಂಗ್ಲೀಷಿಗೆ ಭಾಷಾಂತರಗೊಂಡ ಕೃತಿಗಳೆಂದೂ ತಿಳಿಯಲು ಸಾಧ್ಯ. **ಕರ್ನಾಟಕವೆಂದರೆ ಒಂದು ಸಂಕ್ಷಿಪ್ತ ಭಾರತ - ಇಷ್ಟು ವಿಶಿಷ್ಟವಾದ ಸಂಗಮ ಬೇರೆ ರಾಜ್ಯಗಳಲ್ಲಿ ಕಾಣುವುದು ಅಪರೂಪ.**

**ಯಾವ ಭಾರತೀಯನೂ 'ಕೇವಲ' ಭಾರತೀಯನಾಗಲಾರ.** ಎಲ್ಲಿಯೂ ಸಲ್ಲದ್ದರಿಂದ, ಎಲ್ಲಿಯಾದರೂ ತೇಲಬಲ್ಲ ತೋರಿಕೆಯ ಭಾರತೀಯ ಇಲ್ಲವೆಂದಲ್ಲ. ಆದರೆ ಈ ಆಕಾಶರಾಯನಿಗೆ ನೆಲೆಯಿಲ್ಲ, ಆಳವಿಲ್ಲ. ನಾವೆಲ್ಲರೂ ಕನ್ನಡಿಗರಾಗಿದ್ದೇ, ಬಂಗಾಳಿಯಾಗಿದ್ದೇ, ತಮಿಳಿನವರಾಗಿದ್ದೇ ಭಾರತೀಯರಾಗಬೇಕು. ನಾವು ಪ್ರಜಾತಾಂತ್ರಿಕ ವ್ಯವಸ್ಥೆಯನ್ನು ಆಯಲೇಬೇಕಾಗಿ ಮಾಡಿರುವ ಈ ನಮ್ಮ ವೈವಿಧ್ಯದ ವಾಸ್ತವ ಒಂದು ವರವೆಂದೇ ತಿಳಿಯಬೇಕು. **"ಅನೇಕತೆಯಲ್ಲಿ ಏಕತೆ"** ನಮ್ಮ ರಾಷ್ಟ್ರದ ವೈಶಿಷ್ಟ್ಯ ಎನ್ನುವಾಗ ಈ ಸತ್ಯವನ್ನು ನಾವು ಮನಗಂಡಿರಬೇಕು; ಇದು ನಮಗೆ ರಾಷ್ಟ್ರದ ವೈಶಿಷ್ಟ್ಯ ಎನ್ನುವಾಗ ಈ ಸತ್ಯವನ್ನು ನಾವು ಮನಗಂಡಿರಬೇಕು; ಇದು ನಮಗೆ



ಸಂತೋಷದ ಸಂಗತಿಯಾಗಿರಬೇಕು. ನಮಗೆ ಹೋಲಿಸಿದರೆ ಚೀನೀಯರು, ಅಮೆರಿಕನ್ನರು ಬಡವರು. ಎಲ್ಲರಿಗೂ ಇಂಗ್ಲಿಷ್ ಗೊತ್ತಿದ್ದೂ ಎಷ್ಟು ಕಷ್ಟಪಟ್ಟು ವೆಲ್ಶ್ ಜನ ಬ್ರಿಟನ್‌ನಲ್ಲಿ ತಮ್ಮ ವೆಲ್ಶ್ ಭಾಷೆಯನ್ನು ಉಳಿಸಿಕೊಂಡಿದ್ದಾರೆ, ನೋಡಿ. ಆದರೆ ನಮಗಿದು ತಾಯಿ ಭಾರತ ಕೊಟ್ಟಿರುವ ಸಹಜವಾದ ವರ. ಆ ವರವನ್ನೇ ಶಾಪ ಮಾಡಿಕೊಳ್ಳುವಂತೆ ನಾವು ಇಂಗ್ಲಿಷಿನಲ್ಲಿ ನಡೆಸುವ ಆಡಳಿತ, ವಿದ್ಯಾಭ್ಯಾಸಗಳು ನಮ್ಮ ಮೂರ್ಖತನದ ಲಕ್ಷಣಗಳೆಂದೇ ತಿಳಿಯಬೇಕು. ಭಾರತೀಯ ಭಾಷೆಗಳನ್ನೆಲ್ಲ ಬದಿಗೊತ್ತಿ, ಕ್ಷೀಣಗೊಳಿಸಿ, ಊಟದ ಹೊತ್ತಿನ ಆಪ್ತತೆಗಾಗಿ ಮಾತ್ರ ಬಳಸುವ ಉಪಭಾಷೆಗಳನ್ನಾಗಿ ಮಾಡಿ, ಟೆಲಿವಿಷನ್‌ನಂತಹ ಮಾಧ್ಯಮಗಳ ಮೂಲಕ ನಮ್ಮನ್ನೆಲ್ಲ ಒಂದೇ ರುಚಿಯ, ಒಂದೇ ಭಾಷೆಯ, ಒಂದೇ ವಿಚಾರದ ಗ್ರಾಹಕರನ್ನಾಗಿ ಪರಿವರ್ತಿಸಿ ಭಾರತದಲ್ಲಿ ಏಕಾಧಿಪತ್ಯ ಸ್ಥಾಪಿಸುವ ಉದ್ದೇಶದ ಕೆಲವರ ಸಂಚಿಗೆ ನಾವು ಬಲಿಯಾಗಬಾರದೆಂದರೆ, ಪ್ರಜಾತಂತ್ರ ಗಟ್ಟಿಯಾಗಬೇಕೆಂದರೆ, ನಮ್ಮೆಲ್ಲರಿಗೂ ನಮ್ಮ ಭಾಷೆಗಳ ಅಭಿಮಾನವು ದೇಹವನ್ನು ದೃಢವಾಗಿಡುವ ಬೆನ್ನಿನ ಮೂಳೆಯಂತಾಗಬೇಕು, ಮರದ ಬೇರಿನಂತಾಗಬೇಕು. ತಲೆ ಎತ್ತಿ ನಮಗೆ ಅನ್ಯವಾದ್ದನ್ನು ನೋಡಿ ಹಿಗ್ಗಲು, ಆಕಾಶದಲ್ಲಿ ಗಾಳಿಗೊಡ್ಡಿ ತೂಗಲು, ನೆಲಸಿದಲ್ಲೇ ವಿಸ್ತಾರವಾಗುವ ಬದುಕಿನ ದಿವ್ಯವನ್ನು ಎದುರಿಸಲು - ಈ ಸ್ಥಿತಿ- ಈ ಎಚ್ಚರದ ಅಭಿಮಾನದ ಸ್ಥಿತಿ - ಪ್ರಪಂಚದ ಪ್ರಜೆಯಾಗಲು ಆಶಿಸುವ, ಭಾರತೀಯ ಪರಂಪರೆಯಲ್ಲಿ ಅತ್ಯುತ್ತಮವಾದ್ದಕ್ಕೆ ಸ್ಪಂದಿಸುವ ಪ್ರತಿ ಕನ್ನಡಿಗನಿಗೂ ಅಗತ್ಯ.

ಕನ್ನಡ ಭಾಷೆಯ ಸ್ಥಿತಿ ಕೂಡ ಹಾಗಿದೆ ಸುಸಂಸ್ಕೃತರಾದ ನಮ್ಮ ಅನಕ್ಷರಸ್ಥರು ಕಿವಿಯಿಂದ ಕಿವಿಗೆ ದಾಟುವಂತೆ ನಮ್ಮ ಪೌರಾಣಿಕ ಪ್ರಜ್ಞೆಯನ್ನು ಈ ಭಾಷೆಯಲ್ಲಿ ಉಳಿಸಿದ್ದಾರೆ. ಪಂಪನಿಂದ ಕುಮಾರವ್ಯಾಸನ ತನಕದ ಲೇಖಕರು ಸಂಸ್ಕೃತದಲ್ಲಿನ ಜೀವಾಳವನ್ನು ದೇಶೀಯ ಅಧಿಕೃತ ಧಾಟಿಯಲ್ಲಿ ಕನ್ನಡಿಸಿದ್ದಾರೆ. ವಚನಕಾರರು ಉಪನಿಷತ್ತಿನ ಋಷಿಗಳಂತೆ ಚಿಂತಿಸಿದ್ದಾರೆ. ನಮ್ಮ ಆಧುನಿಕರು ಐರೋಪ್ಯ ಸಂಸ್ಕೃತಿಯ ಜೀವಾಳವನ್ನು ತಮ್ಮ ತಮ್ಮ ವಿಶಿಷ್ಟ ಅನುಭವದ ಮೂಸೆಯಲ್ಲಿ ಎರಕಹೊಯ್ದು ಕನ್ನಡಕ್ಕೆ ತಂದಿದ್ದಾರೆ. ಕನ್ನಡ ಒಂದು ಜೇಣರ್ಾಗ್ನಿಯಂತೆ ಎಲ್ಲ ಭಾಷೆಗಳಿಂದಲೂ ತನ್ನ ಹವಿಸ್ಸನ್ನು ಪಡೆದಿದೆ; ತನ್ನತನ ಕಳೆದು ಕೊಳ್ಳದಂತೆ ಪ್ರತಿಭಾಶಾಲಿಗಳಲ್ಲಿ ಮನಸ್ಸಿನ ವಿಸ್ತಾರವನ್ನು ಸಾಧಿಸಿಕೊಂಡಿದೆ.

ಜೀವದ ರಕ್ಷಣೆಗೆ ಸ್ವಪ್ರೇಮ ಅಗತ್ಯ. ಆದರೆ ವಿಪರ್ಯಾಸವೆಂದರೆ ಈ ಪ್ರಪಂಚದಲ್ಲಿ ಇರುವುದು ತಾನೊಬ್ಬನೇ ಎಂದು ತಿಳಿದ ಜೀವಿಗೆ ರಕ್ಷಣೆಯೂ ಇಲ್ಲ, ಪೋಷಣೆಯೂ ಇಲ್ಲ. ಆದ್ದರಿಂದಲೇ ನಾವು ಕುಟುಂಬ, ಜಾತಿ, ಧರ್ಮ, ಕಸುಬು - ಹೀಗೆ ಹಲವು ಮಟ್ಟದ ಸಮುದಾಯಗಳಲ್ಲಿ ನಮಗೆ ಅನ್ಯವಾದದ್ದನ್ನು ಒಳಗೊಂಡು ವಿಸ್ತಾರವಾಗಲು ಹವಣಿಸುತ್ತೇವೆ. ಈ ಎಲ್ಲ ಸಮುದಾಯಗಳಿಗಿಂತಲೂ ನಮ್ಮ ಕಾಲಕ್ಕೆ ನಮಗೆ ಅನ್ಯವಾದ್ದನ್ನು ಕಲ್ಪನೆಯ ವಿಲಾಸದಲ್ಲಿ, ವೈಚಾರಿಕ ಸಂಘರ್ಷದಲ್ಲಿ, ವೈಯಕ್ತಿಕವಾದ ಜರೂರಿನಲ್ಲಿ ಒಳಗೊಳ್ಳಬೇಕಾದ ಸ್ಥಿತಿಯನ್ನು ಸದಾ ಒಡ್ಡುವಂಥದೆಂದರೆ ಭಾಷೆ. ಜಾತಿ, ಮತ, ಧರ್ಮಗಳು ರಚಿಸುವ ಸಮುದಾಯ ತನಗಿಂತ ಅನ್ಯವಾದ್ದಕ್ಕೆ ಕುರುಡಾಗಿರುವುದೇ ಹೆಚ್ಚು. ವೈದಿಕ, ಕ್ರೈಸ್ತ, ಬೌದ್ಧ, ಜೈನ, ಮುಸ್ಲಿಂ - ತನಗೆ ಅನ್ಯವಾದ್ದನ್ನು ಸ್ವೀಕರಿಸಿದ ಸಂದರ್ಭಗಳು ಅಪರೂಪ. ಆದರೆ ನನ್ನ ಭಾಷೆಯಲ್ಲಿನ ಸಾಹಿತ್ಯವನ್ನು ನಾನು ಓದುವಾಗ ಪರಕಾಯ ಪ್ರವೇಶ ಮಾಡುವ ಕಲ್ಪನಾಶಕ್ತಿ ತನ್ನಿಂದ ತಾನೇ ಅನಿವಾರ್ಯವಾಗಿ ಹುಟ್ಟಿಕೊಳ್ಳುತ್ತದೆ. ನಮಗೆ ಹೊರಗಿನದೆಲ್ಲ ನಮ್ಮ ಒಳಗಿನದಾಗುತ್ತದೆ. ಅಷ್ಟೇ ಅಲ್ಲ - ನಮ್ಮ ನಾಡಿನ ಪಿತೃ ಪಿತಾಮಹರೂ ನಮ್ಮ ಜೊತೆ ಮಾತಾಡುತ್ತಾರೆ. ಪಂಪ, ಕುಮಾರವ್ಯಾಸ, ವಚನಕಾರರು,ಯಾಕೆ ಕಾಳಿದಾಸ, ಶೇಕ್ಸ್‌ಪಿಯರ್, ಟಾಲ್‌ಸ್ಟಾಯರೂ ಕನ್ನಡದಲ್ಲಿ ಒಳಗೊಳ್ಳುವ ಆಹ್ವಾನದಲ್ಲಿ ನಮಗೆ ಎದುರಾಗುತ್ತಾರೆ. ಒಂದು ಭಾಷೆಯಲ್ಲಿ ನೆಲೆಯೂರಿದವನಿಗೆ ಮಾತ್ರ ತನ್ನ ವ್ಯಕ್ತಿತ್ವ ವಿಸ್ತಾರವಾಗುವಂತೆ, ಈ ವಿಸ್ತಾರ ಅಧಿಕೃತವಾಗುವಂತೆ ಸಿಗುವ ಆಹ್ವಾನ ಇದು.

ಸಾಹಿತ್ಯದ ಅನುಭವದಲ್ಲಿ ನಾವು ಅನ್ಯವನ್ನು ಒಳಗೊಳ್ಳುತ್ತ ವಿಸ್ತಾರವಾಗುವುದು ಮಾತ್ರವಲ್ಲ, ಒಬ್ಬ ವಿಜ್ಞಾನಿ ಅಥವಾ ತಂತ್ರಜ್ಞ ತನ್ನ ಕಾಲದ ತನ್ನ ಜನರ ಅಗತ್ಯಗಳ ಸವಾಲಿಗೆ ಉತ್ತರ ಹುಡುಕುವ ಪ್ರೇರಣೆ ಪಡೆಯುವುದೂ ಆ ಭಾಷೆಯನ್ನಾಡುವ ಜನರಲ್ಲಿ ಒಬ್ಬನಾಗಿರುವುದರಿಂದ. ಮಾನವೀಯ ಶಾಸ್ತ್ರಗಳಲ್ಲಂತೂ ತನ್ನ ನಾಡಿನ ಭಾಷೆಯ ಸೂಕ್ಷ್ಮ ತಿಳಿಯದೆ ಹೊಸದಾಗಿ ಯಾರೂ ಚಿಂತಿಸಲಾರರು. ಭಾರತದ ಎಷ್ಟೇ ವಿಜ್ಞಾನಿಗಳ, ಮಾನವಶಾಸ್ತ್ರಜ್ಞರ ಸಂಶೋಧನೆ ಅಪ್ರಸ್ತುತವೊ ಅಥವಾ ಅಲ್ಪ ವಿಷಯದ್ದೊ ಆಗಲು ಒಂದು ಕಾರಣವಾದರೂ ಖಂಡಿತವಾಗಿ ಅವರಲ್ಲಿ ಹಲವರಿಗೆ ಭಾರತದ ಯಾವುದಾದರೊಂದು ಭಾಷೆಯಲ್ಲಿ, ಆ ಮೂಲಕ ಜನಜೀವನದ ಆಶೋತ್ತರಗಳಲ್ಲಿ, ನೆಲೆಯಿಲ್ಲದಿರುವುದೇ ಎಂದು ಅನ್ನಬಹುದು. ಭಾಷಾದರಿದ್ರರು ಎಂದೂ ಆಳವಾಗಿ ಪ್ರಸ್ತುತವೆನ್ನುವಂತೆ ಅಮೂರ್ತ ಚಿಂತನೆಯನ್ನು ದಕ್ಕಿಸಿಕೊಳ್ಳಲಾರರು. ಗಣಿತಶಾಸ್ತ್ರ ಮಾತ್ರ ಇದಕ್ಕೆ ವಿನಾಯಿತಿಯೇನೊ - ನನಗೆ ತಿಳಿಯದು. ನಮ್ಮ ಕಾಲದ ಮಹಾನ್ ವ್ಯಕ್ತಿಗಳಾದ ಇಬ್ಬರು - ಮಹಾತ್ಮ ಗಾಂಧಿ ಮತ್ತು ಐನ್‌ಸ್ಟೇನ್ - ತಮ್ಮ ವಿಶಿಷ್ಟ ಸಂಸ್ಕೃತಿಗಳಲ್ಲಿ ಬೇರೂರಿದ್ದವರು ಮಾತ್ರವಲ್ಲ - ಆ ಮೂಲಗಳಿಂದಲೇ





ಜಗದ್‌ವ್ಯಾಪಿಯಾಗುವ ಒತ್ತಡಗಳಿಗೆ ಒಳಗಾಗಿ ಚಿಂತಿಸಿ ಕ್ರಿಯಾಶೀಲರಾದವರು.

ಕನ್ನಡ ತನದ ಸಾತ್ವಿಕ ಕೆಚ್ಚಿನಿಂದ ಕ್ರಿಯಾಶೀಲನಾಗುವವನು ಈ ಕಾಲದ ಸವಾಲುಗಳನ್ನು ಹೇಗೆ ಎದುರಿಸುತ್ತಾನೆ, ಎಂಥ ನಿಲುವ ತಾಳಿ ಹೋರಾಡುತ್ತಾನೆ ಎಂಬುದನ್ನು ನೋಡೋಣ.

***ಮೊದಲನೆಯ ನಮ್ಮ ಉಳಿವಿನ, ಬೆಳವಣಿಗೆಯ ಸೂತ್ರ :***

ವಿಕೇಂದ್ರೀಕರಣ. ದೂರದರ್ಶನದಲ್ಲಿ ಬೆಂಗಳೂರಿನ ಕಾರ್ಯಕ್ರಮ ಕೊನೆಯಾಗುತ್ತಿದ್ದಂತೆ ಇನ್ನು ಮುಂದೆ ರಾಷ್ಟ್ರೀಯ ಕಾರ್ಯಕ್ರಮ ಎಂದು ಹೇಳಲಾಗುತ್ತದೆ. ಬೆಂಗಳೂರಲ್ಲಿ ನಡೆಯುವುದೇನು ರಾಷ್ಟ್ರದ ಕೆಲಸವಲ್ಲವೆ? ಗೋವಿನ ಹಾಡಿನ ಕವಿಗೆ ಕರ್ನಾಟಕ ದೇಶವಿರುವುದು ಧರಣಿ ಮಂಡಳ ಮಧ್ಯದೊಳಗೆ. ಯಾವುದೇ ಹಳ್ಳಿಯ ಬಾವಿಯಿಂದ ಎತ್ತಿದ ನೀರನ್ನು ತಲೆಯ ಮೇಲೆ ಹೊಯಿದು ಕೊಳ್ಳುವಾಗ ನಮ್ಮ ಪ್ರಾರ್ಥನೆ : ***ಗಂಗೇಚ ಯಮುನೇ ಚೈವ ಗೋದಾವರಿ ಸರಸ್ವತಿ ನರ್ಮದೇ ಸಿಂಧು ಕಾವೇರಿ ಜಲೇಸ್ಮಿನ್ ಸನ್ನಿಧಿಂ ಕುರು.*** ಭಾರತದ ಎಲ್ಲ ಪವಿತ್ರ ಜಲಗಳೇ ಈ ಬಿಂದಿಗೆಯಲ್ಲಿ ನೀವು ಬಂದೊದಗಿ ಎಂದು ಹೇಳುತ್ತೇವೆ. ಭಾರತದ ಕೇಂದ್ರ ದೆಹಲಿ ಮಾತ್ರವಲ್ಲ, ಪ್ರತಿ ಊರು ಭಾರತದ ಕೇಂದ್ರವೇ. ಹಾಗೆ ತಿಳಿಯದಿದ್ದಲ್ಲಿ, ತಿಳಿದು ವಿಕೇಂದ್ರೀಕರಿಸದಿದ್ದಲ್ಲಿ ನಾವು ***'ಬಾಲ್ಕನೈಸ್'*** ಆಗುತ್ತೇವೆ, ಛಪ್ಪನ್ನೈವತ್ತಾರು ದೇಶಗಳಾಗಿ ಒಡೆದು ಹೋಗುತ್ತವೆ.



If you do not decentralise, you will balkanise- ಇದು ನಮ್ಮ ಎಚ್ಚರಿಕೆಯ ಮಂತ್ರವಾಗಬೇಕು. ವಿಕೇಂದ್ರೀಕರಣ, ಇಲ್ಲವೇ ಛಿದ್ರೀಕರಣ - ಇದನ್ನು ಅರಿಯದ ಪ್ರಭುತ್ವ ಮೂರ್ಖತನದ್ದು. ಪಂಜಾಬ್, ಕಾಶ್ಮೀರ,ಅಸ್ಸಾಂ - ಈಗಾಗಲೇ ನಮ್ಮನ್ನು ಎಚ್ಚರಿಸಿವೆ. ಒಮ್ಮೆ ಛಿದ್ರವಾದರೆ, ನಮ್ಮ ಭದ್ರತೆಗೆ ಮಾತ್ರ ನಷ್ಟವಲ್ಲ - ಭಾರತ ಮತ್ತೆ ಹಿಂದೆ ಸರಿದೀತು. ಆಧುನಿಕ ಯಂತ್ರ ಯುಗದಲ್ಲಿ ಛಿದ್ರವಾಗುವುದಕ್ಕೂ, ಗ್ರಾಮೀಣ ಉತ್ಪಾದನಾ ಯುಗದಲ್ಲಿ ಹಲವು ರಾಜ್ಯಗಳಾಗಿ ಕಾದಾಡುತ್ತ ಬದುಕಿದ್ದಕ್ಕೂ ನಡುವೆ ವ್ಯತ್ಯಾಸವಿದೆ. ಈಗ ರಾಜಕೀಯ ಮನೆ ಮನೆಯನ್ನು ಪ್ರವೇಶಿಸುತ್ತದೆ. ನಮ್ಮ ಇಡೀ ಸಂಸ್ಕೃತಿಯನ್ನು ಬದಲಾಯಿಸುತ್ತದೆ. ವಿಶ್ವ ಭಾವನೆಯತ್ತ ದೊಡ್ಡ ಪ್ರಮಾಣದ ಪ್ರಯೋಗ ಮಾಡಬಲ್ಲ ಅನೇಕತೆಯಲ್ಲಿ ಏಕತೆ ಪಡೆದು ಪುಟ್ಟ ವಿಶ್ವವೇ ಆಗಿರುವ ನಮ್ಮ ಭಾರತ, ಎಲ್ಲ ಭವಿಷ್ಯದ ಒಂದು ದೊಡ್ಡ ಸವಾಲನ್ನೇ ಕಳೆದುಕೊಂಡು ಕುಗ್ಗಿ ಬಿಡುತ್ತದೆ. ಆದ್ದರಿಂದ ಭಾರತವನ್ನು ನಿಜವಾಗಿ ಪ್ರೀತಿಸುವ ಮನಸ್ಸು ಅನೇಕತೆಗೆ ಅತಿ ಅಗತ್ಯವಾದ ಆರ್ಥಿಕ ನಿರ್ವಹಣೆಯ ವಿಕೇಂದ್ರೀಕರಣವನ್ನು ಜಾರಿಗೆ ತರಬೇಕು. ರಾಜ್ಯಗಳು ಕೇಂದ್ರದ ಕೈಗೊಂಬೆಗಳಾಗಬಾರದು. ನಮ್ಮ ಸಂವಿಧಾನದ ಮಾತು ಕೇಂದ್ರವಲ್ಲ, ಒಕ್ಕೂಟ. ಭಾರತ ಹಲವು ರಾಜ್ಯಗಳ ಒಕ್ಕೂಟ, ಯೂನಿಯನ್.

ಪ್ರಭುತ್ವ ದೆಹಲಿಯಿಂದ ಬೆಂಗಳೂರಿಗೆ ವರ್ಗಾವಣೆಯಾದರೆ ಮಾತ್ರ ಸಾಲದು. ಬೆಂಗಳೂರಿಂದ ಪ್ರತಿ ಜಿಲ್ಲೆಗೆ, ಜಿಲ್ಲೆಯಿಂದ ಪ್ರತಿ ಹಳ್ಳಿಗೆ ವರ್ಗಾವಣೆಯಾಗಬೇಕು. ಅಂದರೆ ಬೆಳಗಾವಿಯ ಹಿತರಕ್ಷಕರು ಬೆಳಗಾವಿಯವರೇ. ಹೀಗಾದಾಗ ನಮ್ಮ ಅನೇಕ ಗಡಿ ಸಮಸ್ಯೆಗಳು ಬಗೆ ಹರಿಯಬಲ್ಲವು. ಯಾಕೆಂದರೆ ಈ ಭಾರತದಲ್ಲಿ ಸರ್ಜನ್‌ಥರ ಕೊಯ್ದು ರಾಜ್ಯಗಳನ್ನು ವಿಂಗಡಿಸುವುದು ಸಾಧ್ಯವೇ ಇಲ್ಲ. ವಿಕೇಂದ್ರೀಕರಣ ಒಂದೇ ಇದಕ್ಕೆ ಪರಿಹಾರ. ನೀರಿನಂತೆ ಜನರೂ ಇಲ್ಲಿ ಹರಿದಾಡಿ ಬದುಕುತ್ತಾರೆ. ಆದ್ದರಿಂದಲೇ ಕಾವೇರಿ ಜಲ ವಿವಾದದಂಥ ಸಮಸ್ಯೆಗಳಿಗೆ ಕಾನೂನಿನ ಚೌಕಟ್ಟಿಲ್ಲಿ ಪರಿಹಾರ ಸಿಗದು. ಕೊಡು ಕೊಳ್ಳುವ ವಿವೇಕದಲ್ಲಿ ಇದು ಬಗೆ ಹರಿಯಬೇಕು. ರಾಜಕೀಯದ ಸ್ವಾರ್ಥದಲ್ಲಿ ಇದು ಬಗೆಹರಿಯಲಾರದು. ಅನ್ನ ನೀರಿನ ಪ್ರಶ್ನೆ ಯಾರ ಪ್ರತಿಷ್ಠೆಯದೂ ಅಲ್ಲ. ಜಾಣನೂ ವಿವೇಕಿಯೂ ಮುತ್ಸದ್ಧಿಯೂ ಇತರರಿಗೂ ಸರಿ ಕಾಣುವಂತೆ ವರ್ತಿಸುವವನೂ ಇದನ್ನು ಬಗೆಹರಿಸಬೇಕು. ಆಸನಕಂಪದಿಂದ ದಿಕ್ಕೆಟ್ಟ ಮುಖ್ಯ ಮಂತ್ರಿಗಳು ನಮ್ಮ ಹಿತಕ್ಕೂ ಮಾರಕರಾಗಬಲ್ಲರು. ಕನ್ನಡ ಹಿತರಕ್ಷಕ ನಾಯಕ ಎಲ್ಲ ಮೊಟ್ಟೆಗಳನ್ನೂ ಒಂದೇ ಬುಟ್ಟಿಯಲ್ಲಿ ತುಂಬುವುದಿಲ್ಲ. ಇಂಥ ಕನ್ನಡದ ನಾಯಕನಿಗೆ ಆತ್ಮ ರಕ್ಷಣೆ, ಪರಹಿತ ಚಿಂತನೆ ಬೇರೆ ಬೇರೆಯಲ್ಲದ ಒಂದು ಹೃದಯವಂತ ನೆಲೆಯೂ ಇದೆ. ಆ ನೆಲೆ ಕಂಡು ಕೊಳ್ಳದ ಹೊರತು ನಾವು ನೆರೆ ರಾಜ್ಯಗಳ ಜೊತೆ ನಾಗರಿಕವಾದ ಸಂಬಂಧ ಸೃಷ್ಟಿಸಿ ಕೊಳ್ಳಲಾರೆವು. ವಿಕೇಂದ್ರೀಕೃತವೂ, ಹಲವು ಪಕ್ಷಗಳ ಒಕ್ಕೂಟದ್ದೂ ಆಗಲಿರುವ ಮುಂದಿನ ಭಾರತದಲ್ಲಿ ಈ ಗುಣಗಳು ಮುಖ್ಯವಾಗುತ್ತವೆ. ಭಾರತ ಅದನ್ನು ಕಲಿಯದಿದ್ದಲ್ಲಿ ನಾವು ಏಕಾಧಿಪತ್ಯದ ಸೊಕ್ಕಿನ ಸೋವಿಯಟ್ ಯೂನಿಯನ್ನಂತೆ ಛಿದ್ರವಾಗುವುದು ಖಂಡಿತ.

**ಎರಡನೆಯ ನಮ್ಮ ಸೂತ್ರ :**

ಯಾವ ರಾಜ್ಯದಲ್ಲಿ ನಾವು ನೆಲೆಸಿ ವ್ಯವಹಾರ ಮಾಡುತ್ತೇವೊ ಆ ರಾಜ್ಯದ ಭಾಷೆಯನ್ನು ಕಲಿಯಬೇಕು, ಮಕ್ಕಳಿಗೆ ಕಲಿಸಬೇಕು. ಹಾಗೆಯೇ ಕನ್ನಡ ನಾಡಿಗೆ ವಲಸೆ ಬಂದ ತಮಿಳಿನವನು ಕನ್ನಡ ಕಲಿಯಬೇಕು. ತಾನು ಬಾಳುವ ಕರ್ನಾಟಕದ ಪರಿಸರ ತನ್ನ ಹಿತದ ಸಾಧನೆಗೆ ಅಗತ್ಯವೆಂದು ತಿಳಿಯಬೇಕು. ಕವಿಯೊಬ್ಬರು ಬರೆದಿದ್ದಾರೆ : ನಾನು ಅಡಿಗೆ ಮನೆಯಲ್ಲಿ ತಮಿಳನ್ನೂ, ಬೀದಿಯಲ್ಲಿ ಕನ್ನಡವನ್ನೂ, ಮಹಡಿ ಮೇಲೆ ಇಂಗ್ಲೀಷನ್ನೂ ಮಾತಾಡಿ ಬೆಳೆದವನು ಎಂದು. ಈಗ ಇವರು ಬರೆಯುತ್ತಿರುವುದು ಕನ್ನಡ



ಮತ್ತು ಇಂಗ್ಲೀಷಿನಲ್ಲಿ. ಭಾಷಾಂತರ ಮಾಡುವುದು ಕನ್ನಡದಿಂದ ಮತ್ತು ತಮಿಳಿನಿಂದ ಇಂಗ್ಲೀಷಿಗೆ. ತಾಯಿ ಅಡಿಗೆ ಮನೆಯಲ್ಲಿ, ಗೆಳೆಯರು ಬೀದಿಯಲ್ಲಿ, ಪ್ರಾಪಂಚಿಕ ಯಶಸ್ಸನ್ನು ಆಶಿಸುವ ತಂದೆ ಮಹಡಿಯಲ್ಲಿ - ಇದೊಂದು ರೂಪಕವಿದ್ದಂತಿದೆ, ಎಲ್ಲ ಭಾರತೀಯರಿಗೂ. ಬಹುಸಂಖ್ಯಾತ ಜನ ಇನ್ನೂ ತಮ್ಮ ತಮ್ಮ ಜಾತಿಯ ವ್ಯವಹಾರಗಳನ್ನು ಜೀವನದ ಆಪ್ತ ಕಾರ್ಯಗಳಲ್ಲಿ ಬಿಟ್ಟಿಲ್ಲವಲ್ಲ? ಆದ್ದರಿಂದ ತಮ್ಮ ಹೆಣ್ಣು ಮಕ್ಕಳು ಮದುವೆಯಾಗಲು ವಿಶಾಲ ಕ್ಷೇತ್ರ ಬೇಕೆಂದು ಕನ್ನಡನಾಡಿನ ತಮಿಳರು ಅಲ್ಪ ಸ್ವಲ್ಪ ತಮಿಳನ್ನು ಉಳಿಸಿಕೊಳ್ಳಬೇಕಾಗುತ್ತದೆ - ಹುಡುಗಿಯ ವರ ತಮಿಳುನಾಡಲ್ಲೋ ದೆಹಲಿಯಲ್ಲೋ ಇರಬಹುದಾದ್ದರಿಂದ, ಮನೆಗೊಂದು ಭಾಷೆ ಹೀಗಾಗಿ ಉಳಿದಿರುತ್ತದೆ - ಕನ್ನಡ ನಾಡಿನಲ್ಲಿ ಮರಾಠಿ, ಉರ್ದು, ತೆಲುಗು, ಸಿಂಧಿ ಇತ್ಯಾದಿ ಮಾತಾಡುವ ಜನರಿಗೆ. ಹಾಗೆಯೇ ಹೊರನಾಡಿನಲ್ಲಿರುವ ಕನ್ನಡಿಗ ಕನ್ನಡ ಉಳಿಸಿಕೊಳ್ಳಬೇಕಾಗುತ್ತದೆ - ಕೇವಲ ಮದುವೆ, ಊಟ, ಉಪಚಾರಕ್ಕಾಗಿ ಮಾತ್ರವಲ್ಲ, ತನ್ನತನದ ಹಲವು ಕೊಂಡಿಗಳ ಸರಪಳಿಯಲ್ಲಿ ಒಂದು ಕೊಂಡಿಯನ್ನು ಉಳಿಸಿಕೊಳ್ಳಲೆಂದು.

**ಈ** ವಿಷಯದಲ್ಲಿ ಯಾರೂ ಅಸಹನೆ ತೋರಬಾರದು. ಆದರೆ ಬೆಂಗಳೂರಲ್ಲಿದ್ದು, ಬೀದಿಯ ವ್ಯವಹಾರದಲ್ಲೂ ಕನ್ನಡ ಬಾರದವರನ್ನು ಕಂಡಾಗ ನಮಗೆ ಪಶ್ಚಾತ್ತಾಪವಾಗುತ್ತದೆ. ತನ್ನ ಸದ್ಯದ ಪರಿಸರಕ್ಕೇ ಕುರುಡನೂ ಕಿವುಡನೂ ಆಗುವ ದುಸ್ಥಿತಿಗೆ ಯಾರೂ ಬರಬಾರದು. ಮಹಾತ್ಮಗಾಂಧಿ ವಿಶ್ವವಿದ್ಯಾಲಯ ಪ್ರಪ್ರಥಮವಾಗಿ ಇಡೀ ಕೊಟ್ಟಾಯಮ್‌ನ್ನು ಅಕ್ಷರಸ್ಥ ಮಾಡಿದ ಸಂದರ್ಭದಲ್ಲಿ ನಾನು ಹೇಳಿದೆ. ನೂರಕ್ಕೆ ನೂರು ಅಕ್ಷರಸ್ಥರಾದ ನಗರ ಇದೆಂದು ನಾನು ಹೇಳಬೇಕಾದ ಈ ಸಂದರ್ಭದಲ್ಲಿ ಒಬ್ಬನೇ ಒಬ್ಬ ಇದಕ್ಕೆ ವಿನಾಯಿತಿ..ಇಲ್ಲಿರುವ ಅನಕ್ಷರಸ್ಥ ನಾನೊಬ್ಬನೇ ಎಂದೆ. ನಿಜ - ತನ್ನ ಪ್ರದೇಶದ ಭಾಷೆಯನ್ನು ಓದಿ ತಿಳಿಯಲು ಬಾರದವನೂ ಅನಕ್ಷರಸ್ಥನೇ. ಆದ್ದರಿಂದ ಕರ್ನಾಟಕದಲ್ಲಿರುವ ತಮಿಳರು, ಉರ್ದುಜನ, ಸಿಂಧಿಗಳು - ಎಲ್ಲರೂ ಅಕ್ಷರಸ್ಥರಾಗುವಂತೆ ಒತ್ತಾಯಿಸುವುದು ನಮ್ಮ ಆದ್ಯ ಕರ್ತವ್ಯವೆನ್ನಬೇಕಾಗುತ್ತದೆ. ಯಾಕೆಂದರೆ ಕನ್ನಡ ಬಾರದವರೆಲ್ಲ ಕರ್ನಾಟಕದಲ್ಲಿ ಅನಕ್ಷರಸ್ಥರೇ. ಹಾಗೂ ಕನ್ನಡ ಸಂಸ್ಕೃತಿಗೆ ಈ ನೆಲದಲ್ಲಿದ್ದೂ ಸ್ಪಂದಿಸಲಾರದವರು ಕುರುಡರಾದ ಅಸಂಸ್ಕೃತರೇ.

**ಈ** ನೇತ್ಯಾತ್ಮಕ ಪ್ರತ್ಯೇಕತೆಗೆ ಈಚಿನ ಒಂದು ಉದಾಹರಣೆ : ತಿರುವಳ್ಳುವರ್ ಪ್ರತಿಮೆ ಬಗ್ಗೆ ಎದ್ದಿರುವ ವಿವಾದ ತಮಿಳರಿಗೆ ತಿರುವಳ್ಳವರ್ ತಮ್ಮ ಪ್ರತಿಷ್ಠೆಯ ಗುರುತಾಗಬಾರದು. ಪ್ರಪಂಚದ ಸಂಸ್ಕೃತಿಗೆ ತಿರುವಳ್ಳುವರ್ ತಮಿಳಿನ ಕೊಡುಗೆಯಾಗಿ ಅವರಿಗೆ ಕಂಡಿದ್ದರೆ, ತಮ್ಮ ಪ್ರತ್ಯೇಕ ಹಿತಾಸಕ್ತಿಯನ್ನು ಕನ್ನಡ ನೆಲದಲ್ಲಿ ಊರುವ ಸಂಕೇತವಾಗದಿದ್ದರೆ, ತಿರುವಳ್ಳವರ್ ಪ್ರತಿಮೆಯನ್ನು ಕನ್ನಡ ಸಾಹಿತ್ಯ ಪರಿಷತ್ತಿಗೆ ಅವರು ದಾನ ಮಾಡಬೇಕಿತ್ತು. ಕನ್ನಡ ಸಾಹಿತ್ಯದೊಳಗೆ ಯಾವತ್ತೂ ಕ್ರಿಯಾಶೀಲವಾಗಿ ಸ್ಪಂದಿಸುವ ವಿಶ್ವ ಭಾವನೆಗೆ ದ್ಯೋತಕವಾಗಿ ಕನ್ನಡ ಸಾಹಿತಿಗಳನ್ನು ನಾವು ಮರ್ಯಾದಿಸುವ ವಲಯದಲ್ಲಿ - ತಮಿಳರು ಅಧಿಕ ಸಂಖ್ಯೆಯಲ್ಲಿರುವ ಜಾಗದಲ್ಲಿ ಅಲ್ಲ - ತಿರುವಳ್ಳುವರ್ ಸ್ಥಾಪಿತವಾಗಬೇಕಿತ್ತು. ನಾವು ಕೊಡುಕೊಳ್ಳುವ ಸರಿಯಾದ ವಿಧಾನವೆಂದರೆ ಇದು. ಕೇವಲ ರಾಜಕೀಯವಾಗಿ ತಮಿಳರು ಯೋಚಿಸುವುದರಿಂದ ಒಬ್ಬ ಕನ್ನಡ ಹಿರಿಯ ಸಾಹಿತಿಯನ್ನು ಪ್ರತಿಮೆಯ ಅನಾವರಣಕ್ಕೆ ಕರೆಯಬೇಕೆಂದು ಕೂಡ ಅವರಿಗೆ ತೋಚದೆ ಹೋದದ್ದು ದುರದೃಷ್ಟಕರ.

ಇಲ್ಲಿರುವ ತಮಿಳರು ಕನ್ನಡಕ್ಕೆ ಸ್ಪಂದಿಸಿದಲ್ಲಿ ತಮಿಳು ಕೂಡ ಬೆಳೆದೀತು. ಬೇಂದ್ರೆ, ಕುವೆಂಪು, ಕಾರಂತ, ಪು.ತಿ.ನ.ರಂಥವರಿಂದ, ಈಗಿನ ಲೇಖಕರಿಂದ ದ್ರಾವಿಡ ಚಳವಳಿಯ ಬಾಯ್ಬಡಕತನದಿಂದ ಮರುಳಾದ ತಮಿಳರು ಕಲಿಯುವುದು ಬಹಳ ಇದೆ. ಇಂಗ್ಲೆಂಡ್ ದೇಶ ಫ್ರಾನ್ಸ್‌ನಿಂದ ಸದಾ ಕಲಿಯುತ್ತಿಲ್ಲವೆ? ಹಾಗೆ.

ತಮಿಳರ ದಬ್ಬಾಳಿಕೆಯಿಂದ ಕನ್ನಡದವರು ತಮ್ಮ ಉದಾರತೆಯನ್ನು ಕಳೆದುಕೊಳ್ಳಬಾರದು. ಆದ್ದರಿಂದಲೇ ಕನ್ನಡಿಗನಾಗಿ ನಾನು ತಿರುವಳ್ಳುವರ್ ಪ್ರತಿಮೆ ಪರ ಮಾತಾಡಿದ್ದು, ಈಗ ಸಂಪೂರ್ಣವಾಗಿ ನನ್ನ ಮನಸ್ಸನ್ನು ಬಿಚ್ಚಲು ಅವಕಾಶವಾಗಿದೆ - ಆದರಿಂದ ನನಗೆ ಸಮಾಧಾನವಾಗಿದೆ.

**ಈ** ಜನರು ಫ್ರಾನ್ಸ್‌ನಲ್ಲೋ, ಡೆನ್ಮಾರ್ಕ್‌ನಲ್ಲೋ, ರಷ್ಯದಲ್ಲೋ ಇದ್ದಿದ್ದರೆ ಏನು ಮಾಡುತ್ತಿದ್ದರು? ಆ ಭಾಷೆಗಳನ್ನು ಕಲಿಯದೇ ಇರುವುದು ಸಾಧ್ಯವಿರುತ್ತಿತ್ತೇ? ಆದರೆ ಇಲ್ಲಿ ಯಾಕೆ ಸಾಧ್ಯ? ನಾವೇ ಇದಕ್ಕೆ ಕಾರಣ. ಯಾಕೆಂದರೆ ಕನ್ನಡದ ಜನ ಈ ದೇಶದ ನಿಜವಾದ ಯಜಮಾನ ಇಂಗ್ಲೀಷ್ ಎಂದು ತಿಳಿದಿರುವುದರಿಂದ, ನಮ್ಮ ಮಕ್ಕಳು ಆದಷ್ಟು ಕಡಿಮೆ ಕನ್ನಡವನ್ನೂ ಆದಷ್ಟು ಹೆಚ್ಚು ಇಂಗ್ಲೀಷನ್ನೂ ಮಾತಾಡುವ ಸಾಧ್ಯತೆಯೇ ಉತ್ತಮ ವಿದ್ಯಾಭ್ಯಾಸ ಎಂದು ತಿಳಿದಿರುವುದರಿಂದ. ಗೋಕಾಕ್ ವರದಿಯ ಭಾಷಾ ನೀತಿಗೆ ನಿಜವಾದ ವೈರವಿದ್ದದ್ದು, ತಮಿಳು, ಉರ್ದು ಭಾಷೆಗಳನ್ನು ಉಳಿಸಿಕೊಳ್ಳಬೇಕೆಂಬ ಛಲದಲ್ಲಿ ಅಲ್ಲ. ಪ್ರತ್ಯಕ್ಷ ಕಂಡದ್ದು ಹಾಗೆ : ಗುಪ್ತವಾಗಿ ಕೆಲಸ ಮಾಡಿದ್ದು ಇಂಗ್ಲೀಷಿಗೆ ಸಮಯ ಕಡಿಮೆಯಾಗುತ್ತದೆಂದು.

**ಮೂರನೆಯ ಸೂತ್ರ :**

ಕರ್ನಾಟಕದಲ್ಲಿ ಎಲ್ಲ ಹಂತದಲ್ಲೂ ನಮ್ಮ ಆಡಳಿತ ಭಾಷೆ







ಸಂಪೂರ್ಣವಾಗಿ ಕನ್ನಡವಾಗಬೇಕೆಂಬುದು. ಯಾವ ಪ್ರಜಾತಂತ್ರದಲ್ಲೂ ಅಲ್ಪ ಸಂಖ್ಯಾತರ ಭಾಷೆ - ಕೇವಲ ವಿದ್ಯಾವಂತರ ಭಾಷೆ - ಆಡಳಿತ ಭಾಷೆಯಾಗಲಾರದು. ಪರನಾಡಿನ ಐ. ಎ. ಎಸ್. ಜನ ಇದಕ್ಕೆ ವಿರೋಧಿಗಳಾಗಿದ್ದರೆ ನಾವು ಐ. ಎ. ಎಸ್ಸೇ ನಮಗೆ ಬೇಡವೆನ್ನಲು ತಯಾರಿರಬೇಕು. ಕೇವಲ ಜಾಣತನ ಆಡಳಿತ ನಡೆಸಲು ಸಾಲದು. ಹಲವು ಭಾಷೆಗಳ ಅಗತ್ಯದ ಮಹಾನ್ ಜಾಣರು ಇರಬೇಕಾದ್ದು ವಿಜ್ಞಾನದಲ್ಲಿ, ಕಲೆಯಲ್ಲಿ, ತಂತ್ರಜ್ಞಾನದಲ್ಲಿ, ಮಾನವ ಶಾಸ್ತ್ರದಲ್ಲಿ. ಇವರಂಥವರು ಅಧಿಕಾರದ ಆಸೆಯಿಂದ ಕಡತದಲ್ಲಿ ಕಣ್ಣು ನೆಟ್ಟವರಾದರೆ ಒಂದೋ ಮನೋರೋಗಿಗಳಾಗಿ ಬಳಲುತ್ತಾರೆ; ಅಥವಾ ತಮ್ಮ ಜಾಣತನವನ್ನು ಕಂಟಕವಾಗುವಂತೆ ಬಳಸುವವರಾಗುತ್ತಾರೆ. ಆಡಳಿತಗಾರ ಹೃದಯವಂತನಾಗಿರಬೇಕು. ಜನರಿಗೆ ಸುಲಭಲಭ್ಯನಾಗಿರಬೇಕು, ಸರಳನೂ, ದಕ್ಷನೂ, ವಿವೇಕಿಯೂ ಆಗಿರಬೇಕು. ವಿಕೇಂದ್ರೀಕೃತ ವ್ಯವಸ್ಥೆಯಲ್ಲಿ ದೆಹಲಿಯ ಜೊತೆ ವ್ಯವಹರಿಸುವ ಅಗತ್ಯವೂ ಕಮ್ಮಿಯಾಗುತ್ತ ಹೋಗುತ್ತದೆ ಯಾದ್ದರಿಂದ ಕನ್ನಡದಲ್ಲಿ ವ್ಯವಹರಿಸುವುದರಿಂದ ನಷ್ಟವೂ ಆಗುವುದಿಲ್ಲ. ಈ ಆಡಳಿತ ಭಾಷೆ ಸುಲಭವೂ, ಸರಳವೂ ಆಗಿರಬೇಕೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಪುತಿನ ಒಮ್ಮೆ ಹೇಳಿದ್ದರು : ಕನ್ನಡ ಅಪ್ಸರೆಯಿದ್ದಂತೆ, ಯಾವ ಭಾಷೆಯಿಂದ ಇವಳು ಪ್ರಭಾವಿತಳಾದಳೂ ಕನ್ನೆಯಾಗಿ ಉಳಿದಿರುತ್ತಾಳೆ. ಉಗ್ರ ತಮಿಳರ ಮಡಿ ನಮಗಿಲ್ಲದಿರುವುದು ನಮ್ಮ ಪುಣ್ಯ.

ಕನ್ನಡ ಇಲ್ಲಿನ ಆಡಳಿತ ಭಾಷೆಯಾದಲ್ಲಿ, ವಿಕೇಂದ್ರೀಕರಣದಿಂದ ಅದು ಸುಸೂತ್ರವಾದಲ್ಲಿ, ಇಲ್ಲಿ ಬದುಕುವ ಜನರೆಲ್ಲರೂ ತಮ್ಮ ಮಾತೃ ಭಾಷೆಗಳನ್ನು ಕೆಲವು ಆತ್ಮೀಯ ಅಗತ್ಯಗಳಿಗೆ ಉಳಿಸಿಕೊಂಡು ಕನ್ನಡ ಕಲಿತವರಾದಲ್ಲಿ, ನಮ್ಮ ನಾಲ್ಕನೆಯ ಸೂತ್ರ - ಕನ್ನಡವೇ ಜ್ಞಾನಾರ್ಜನೆಯ ಮಾಧ್ಯಮವಾಗುವುದು, ಅತ್ಯಂತ ಸಹಜವಾದ ನಿರ್ಧಾರವಾಗಿರುತ್ತದೆ. ಕುವೆಂಪು ಮತ್ತು ಮಾಸ್ತಿಯವರು ಈ ವಿಷಯದ ಬಗ್ಗೆ ಎಷ್ಟು ವೈಜ್ಞಾನಿಕವಾಗಿ ಮಾತಾಡಿದ್ದಾರೆಂದರೆ, ನಾವು ಹೆಚ್ಚೇನೂ ಹೇಳಬೇಕಾಗಿಲ್ಲ. ಜೀವಿಸುವ ಭಾಷೆಯಲ್ಲಿ ಕಲಿಯದವನು ಕೇವಲ ಬಾಯಿ ಪಾಠದ ಗಿಣಿಯಾಗುತ್ತಾನೆ. ಸ್ವತಂತ್ರ ವಿಚಾರ ಅವನಿಗೆ ಸಾಧ್ಯವಿಲ್ಲ. ಯಾಕೆಂದರೆ ತನ್ನ ನೆಲದಲ್ಲಿ ನಿಂತು ಅವನು ಸಹಜವಾಗಿ ಯೋಚಿಸುವುದಿಲ್ಲ. ಅನುಕರಣೆ ಮಾತ್ರ ಸಾಧ್ಯ. ಯಾವ ಭಾರತೀಯ ಭಾಷೆಯನ್ನೂ ತಿಳಿಯದವನು ತಂತ್ರಜ್ಞನಾದರೆ, ಇಲ್ಲಿ ಅವನು ಸಮರ್ಥ ಉದ್ಯಮಶೀಲನಾಗಲಾರ. ಮಾನವಶಾಸ್ತ್ರಜ್ಞ, ತನ್ನ ಸುತ್ತಲಿನ ಸತ್ಯವನ್ನು ಮುಟ್ಟಿ ಕಚ್ಚಿ ತಿಳಿಯಲಾರ: ತಿಳಿಯಲು ಯಾವುದು ಮುಖ್ಯ ಎಂಬ ಸಂವೇದನೆಯನ್ನೂ ಪಡೆದಿರಲಾರ. ಆದ್ದರಿಂದಲೇ ಕರ್ನಾಟಕದ ಅತ್ಯುತ್ತಮ ಚಿಂತಕರು ಸಹ - ಸಮಾಜಶಾಸ್ತ್ರ, ದರ್ಶನ, ತತ್ವಶಾಸ್ತ್ರ ರಾಜಕೀಯಶಾಸ್ತ್ರ ಈ ವಿಷಯಗಳಲ್ಲೂ - ಅವನ್ನು ಪಾಠ ಮಾಡುತ್ತಿರುವ ಪ್ರಾಧ್ಯಾಪಕರಲ್ಲ, ನಮ್ಮ ಕನ್ನಡ ಸಾಹಿತಿಗಳು. ಇದಕ್ಕೆ ವಿನಾಯಿತಿಯಿದ್ದರೆ, ಅವರು ಕನ್ನಡದಲ್ಲಿ ಬರೆಯುವ ಅಥವಾ ಕೊನೆಯಪಕ್ಷ ಕನ್ನಡ ತಿಳಿಯುವ ಶಕ್ತಿಯುಳ್ಳವರಾಗಿದ್ದಾಗ ಮಾತ್ರ.

ಹೀಗೆ ಮಾತಾಡುವ ನಮ್ಮಂಥವರೇ ನಮ್ಮ ಮಕ್ಕಳನ್ನೇ ಕನ್ನಡ ಮಾಧ್ಯಮದಲ್ಲಿ ಓದಿಸುತ್ತಿಲ್ಲವೆಂಬ ಅಪವಾದವಿದೆ. ಇದು ನಿಜವೇ. ನಾವು ಹಳ್ಳಿಗಳಲ್ಲಿದ್ದಾಗ, ಇರುವ ಒಂದೇ ಶಾಲೆ ಕನ್ನಡ ಮಾಧ್ಯಮವಿದ್ದಾಗಿ ಬೇರೆ ದಿಕ್ಕಿಲ್ಲದೆ ಮಕ್ಕಳು ಕನ್ನಡದಲ್ಲಿ ಕಲಿಯುತ್ತವೆ - ಅಷ್ಟೆ. ಹಳ್ಳಿಗಳಲ್ಲಿ ಶ್ರೀಮಂತರಾದವರು ತಮ್ಮ ಮಕ್ಕಳನ್ನು ಬೇರೆಡೆ ಇಟ್ಟು ಇಂಗ್ಲೀಷಿನಲ್ಲಿ ಕಲಿಸುತ್ತಾರೆ. ಇನ್ನು ಒಂದೆರಡು ದಶಕಗಳಲ್ಲಿ, ೨೧ನೇ ಶತಮಾನದಲ್ಲಿ ಕನ್ನಡದಲ್ಲಿ ಬರೆಯಬಲ್ಲವರೆಲ್ಲರೂ ಬಡಹಳ್ಳಿಗ ಕುಟುಂಬಗಳಿಂದ ಬಂದವರಾಗಿರುತ್ತಾರೆ. ನಮ್ಮ ಮಧ್ಯಮ ವರ್ಗದ ಸಿಟಿ ಜನರ ಕುಟುಂಬಗಳಿಂದಂತೂ ಅವರು ಬಂದಿರುವುದಿಲ್ಲ. ಯಾಕೆಂದರೆ ಕೊನೆಪಕ್ಷ ಹತ್ತನೇ ಇಯತ್ತೆಯ ತನಕವಾದರೂ, ತನ್ನ ಅರಿವಿನ ತೀಕ್ಷ್ಣ ಬೆಳವಣಿಗೆಯ ಹದಿನೈದು ಹದಿನಾರು ವರ್ಷಗಳ ತನಕವಾದರೂ, ಕನ್ನಡದಲ್ಲಿ ವಿಷಯಜ್ಞಾನ ಸಂಪಾದಿಸದವನು, ಕನ್ನಡದಲ್ಲಿ ಮಾತನಾಡ ಬಲ್ಲವನಾದರೂ ತನ್ನ ಭಾಷೆಯಲ್ಲಿ, ಕ್ರಮೇಣ ಮರೆತುಹೋಗುವ ಅಕ್ಷರ ತಿಳಿದ ಅನಕ್ಷರಸ್ಥನಾಗಿರುತ್ತಾನೆ. ಅಂಥವರು ಬೆಳೆಯುತ್ತಿದ್ದಂತೆ ಓದುವುದೆಲ್ಲ ಸಮೃದ್ಧವಾದ ಮನರಂಜನೆಯ, ಅದರಲ್ಲೂ ಆಧುನಿಕ ಮನರಂಜನೆ ಪಡೆದ ಇಂಗ್ಲೀಷ್ ಪುಸ್ತಕಗಳನ್ನೇ. ನಮ್ಮ ಕಾರಂತ, ಕುವೆಂಪು, ಮಾಸ್ತಿ, ಬೇಂದ್ರೆ - ಯಾರನ್ನೂ ಇವರು ಓದಿರುವುದಿಲ್ಲ. ಸುಧಾ ಮತ್ತು ತರಂಗಗಳನ್ನು ಓದ ಬಯಸುವವರೂ ಇವರಾಗಿರುವುದಿಲ್ಲ. ನಾವು ಉತ್ಪ್ರೇಕ್ಷೆ ಮಾಡುತ್ತಿರಬಹುದು. ಆದರೆ ಅಂಥ ಉತ್ಪ್ರೇಕ್ಷೆಯನ್ನು ಬಯಸುವ ಸಾಸಂಸ್ಕೃತಿಕ ಬಡತನದ ಅಪಾಯ ಈ ನಮ್ಮ ಸ್ಥಿತಿಯಲ್ಲಿದೆ.

ಸರ್ಕಾರ ನಡೆಸುವ ಯಾವ ಕನ್ನಡ ಮಾಧ್ಯಮ ಶಾಲೆಯೂ ಇಂಗ್ಲೀಷ್ ಮಾಧ್ಯಮ ಶಾಲೆಯಷ್ಟು ಚೆನ್ನಾಗಿರುವುದಿಲ್ಲವೆಂಬುದು ಇದಕ್ಕೆ ಮುಖ್ಯ ಕಾರಣ. ಮೈನಾರಿಟಿ ಜನ ತಮ್ಮ ಸ್ವಾತಂತ್ರ್ಯವನ್ನು ಇಂಗ್ಲೀಷ್ ಮಾಧ್ಯಮದ ವ್ಯಾಪಾರದ ಮೂಲಕ ದುರುಪಯೋಗ ಪಡಿಸಿಕೊಳ್ಳುತ್ತಿದ್ದಾರೆಂಬುದೂ ನಿಜವೇ. ಆದರೆ ನಾವು ಕನ್ನಡಿಗರೇ ಅದನ್ನು ಬಯಸದಿದ್ದಲ್ಲಿ, ಮತ್ತು ಈ ಬಯಕೆಯ ಹಿಂದೆ ಇರುವ ಒಂದು ಸಾರ್ವತ್ರಿಕ ಸತ್ಯವಾದ ಆಧುನಿಕ ಜಗತ್ ವ್ಯವಸ್ಥೆಗೆ ("Modern World System"ಗೆ) ನಾವೆಲ್ಲರೂ ಒಳಗಾಗಬೇಕೆಂಬ ತೃಷೆಯ ರೋಗಕ್ಕೆ ನಾವೆಲ್ಲರೂ ಬಲಿಗಳಾಗದಿದ್ದಲ್ಲಿ, ಈ ಪರಿಸ್ಥಿತಿಯೇ ಉದ್ಭವಿಸುತ್ತಿರಲಿಲ್ಲ.

ಆಧುನಿಕ ಜಗತ್ ವ್ಯವಸ್ಥೆಗೆ ಅನುಗುಣವಾಗಿ ಭಾರತ ರೂಪುಗೊಳ್ಳುವುದು - ಮಹಾತ್ಮಗಾಂಧಿಯ ಕನಸನ್ನು ತಿರಸ್ಕರಿಸಿ ಬೆಳೆಯುವುದು - ಕೇವಲ ನಮ್ಮ ಆದರ್ಶವಾದೀ ನಿಲುವಿನಿಂದ ಬದಲಾಗುವಂಥದಲ್ಲ. ಇದಕ್ಕೆ ಪರ್ಯಾಯವೆಂದು ಭ್ರಮಿಸುತ್ತಿದ್ದ ಮಾರ್ಕ್ಸ್‌ವಾದೀ ವ್ಯವಸ್ಥೆಗಳೂ ಜಗತ್ತಿನಲ್ಲೆಲ್ಲ ಮುರಿದು ಬೀಳುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಪ್ರಪಂಚದ ನಾಶದ ಸಾಧ್ಯತೆಯ ಕಂದಕದ ಅಂಚಿಗೆ ಬರುವ ತನಕ ಈ ಆಕರ್ಷಕ ರೋಗದ ಅಪಾಯವನ್ನು ನಾವೆಲ್ಲರೂ, ನಮ್ಮ ಅಸ್ತಿತ್ವದಲ್ಲೇ ಅಧಿಕೃತವೆನ್ನುವಂತೆ ತಿಳಿಯಲಾರೆವೆಂದು ಕಾಣುತ್ತದೆ. ಎಲ್ಲರನ್ನೂ ಒಂದೇ ರೂಪಹೀನ ಎರಕದಲ್ಲಿ ಅದ್ದಿ ಕೇವಲ ಗ್ರಾಹಕರನ್ನಾಗಿ ಮಾಡಹೊರಟ ಈ ಆಧುನಿಕ ಜಗತ್ ವ್ಯವಸ್ಥೆಯ ಹಸಿವಿಗೆ ರುಚಿಯ ಭೇದಗಳು, ಭಾಷೆ ಮತ್ತು ಸಂಸ್ಕೃತಿಯಿಂದ ಹುಟ್ಟುವ ವೈಶಿಷ್ಟ್ಯಗಳು ದೊಡ್ಡ ತೊಡಕುಗಳು. ಇಂಗ್ಲೀಷ್ ಮೋಹದ ಹಿಂದಿರುವುದು ಕೆಲವು ಸಜ್ಜನರು ತಿಳಿದಂತೆ ಶೇಕ್ಸ್‌ಪಿಯರ್ ವರ್ಡ್ಸ್‌ವರ್ಥರ ಸಾಹಿತ್ಯವಲ್ಲ, ಸತ್ಯಾನ್ವೇಷಣೆಯ ತಪಸ್ಸಿನ ವಿಜ್ಞಾನವೂ ಅಲ್ಲ, ಅದು ನಿಸರ್ಗವನ್ನು ತಾಂತ್ರಿಕತೆಯ ಅಟ್ಟಹಾಸದಲ್ಲಿ ಮೆಟ್ಟಿ ನಿಲ್ಲುವ ಬಹೂತ್ಪನ್ನದ ಸ್ವರ್ಗದ ಲಾಲಸೆ. ಇವತ್ತಿನ ಜಗತ್ತಿನಲ್ಲಿ ಈ ಸಾಧ್ಯತೆ ಯಾರನ್ನು ತಾನೇ ಆಕರ್ಷಿಸುತ್ತಿಲ್ಲ? ಜೊತೆಗೇ ಪರಿಸರದ ಸಮತೋಲನದ ನಾಶ ಕೂಡ ಬಾಧಿಸದೇ ಇರುವ ಸೂಕ್ಷ್ಮಜ್ಞರಿಗೂ ಕೊರತೆಯಿಲ್ಲ. ಈ ಸಂದಿಗ್ಧದಿಂದಾಗಿಯೇ, ನಮ್ಮ ತಪ್ಪಿಗೆ ಶಿಕ್ಷೆ ಈಗ, ಇಲ್ಲೇ ಸಿಗುವಂತೆ ಕಾಣುವುದರಿಂದಲೇ ಕೆಲವು ರಕ್ಷಣೋಪಾಯಗಳನ್ನಾದರೂ ನಿರಾಕರಿಸುವಂತಿಲ್ಲ. ಕನ್ನಡತನದ ಆಸೆ ಇಂಥ ಒಂದು ರಕ್ಷಣೋಪಾಯವೆನ್ನಬಹುದು.

ಪ್ರಳಯೋನ್ಮುಖವಾದ ನಮ್ಮ ಜಗತ್ತಿನಲ್ಲಿ ಮನುಷ್ಯನನ್ನು ಪಾಶ್ಚಿಮಾತ್ಯ ತಾಂತ್ರಿಕತೆ ಸ್ಮೃತಿಕೆ ಇಲ್ಲದವನನ್ನಾಗಿಯೂ, ಆಕಾರ ಹೀನನ್ನಾಗಿಯೂ, ಮನೆಯಿಲ್ಲದ ತಬ್ಬಲಿಯನ್ನಾಗಿಯೂ ಮಾಡುವತ್ತ ಕೊಂಡೊಯ್ಯುತ್ತಿದೆ ಎಂದು ಹಲವು ಪಾಶ್ಚಿಮಾತ್ಯ ದ್ರಷ್ಟಾರರು ಭಯಪಡುತ್ತಾರೆ ಎಂಬುದು ಈ ರಕ್ಷಣೋಪಾಯಕ್ಕೆ ಸಮರ್ಥನೆ ನೀಡುತ್ತದೆ. ಹೆಗೆಲ್ ಮತ್ತು ಮಾರ್ಕ್ಸ್‌ರಿಗೆ ಇತಿಹಾಸ ಏರುತ್ತಿರುವ ಸಂಗತಿಯಾದರೆ, ಈ ಏರುವಿಕೆಗೆ ಮಾದರಿ ಯೂರೋಪಾದರೆ, ಹೈಡೆಗರ್‌ರಂಥವರಿಗೆ ಈ ಏರುವಿಕೆಯೇ ಮಾನವನನ್ನು ತಬ್ಬಲಿಯಾಗಿಸುತ್ತದೆ.

ಇಂಥ ಒಂದು ಐತಿಹಾಸಿಕ ಸಂದರ್ಭದಲ್ಲಿ ಕನ್ನಡದಂತಹ ಭಾಷೆಗಳು ನಾವು ಅಡಗುವ ಜಾಗಗಳಾಗಬಹುದು. ಅಡಗಿದ್ದು ನೆನಪಿನ ಸಾತತ್ಯವನ್ನು ಸಾಧಿಸುವ ಸ್ಮೃತಿಕೆಯ ಆಶ್ರಯಸ್ಥಾನಗಳಾಗಬಹುದು. ದುರಾಸೆಯಲ್ಲಿ ತಮ್ಮ ರೂಪವನ್ನು ಕಳೆದುಕೊಳ್ಳುವವರ ನಡುವೆ, ಮಾನವ ಧರ್ಮವನ್ನು ಸಾರಗ್ರಾಹಿಯಾಗಿ ಸ್ವೀಕರಿಸಿದ ಒಂದು ಸಂಸ್ಕೃತಿಯಾಗಿ ಕನ್ನಡ ಹಾಗೂ ಉಳಿದ ಭಾರತೀಯ ಭಾಷೆಗಳು ನಿಲ್ಲಬಹುದು. ಆದರೆ ಅದಕ್ಕಾಗಿ ನಾವು ಐತಿಹಾಸಿಕ ಪ್ರವಾಹದಲ್ಲಿ ಕೊಚ್ಚಿ ಹೋಗದಂಥ ಉಪಾಯಗಳನ್ನು ಹುಡುಕಬೇಕು. ವ್ಯವಹಾರಜ್ಞರೂ, ಚತುರರೂ ಆಗಿ ವರ್ತಿಸಬೇಕು. ಅದಕ್ಕೊಂದು ಉದಾಹರಣೆ: ಬೋಧನೆ ಪ್ರೈಮರಿಯಿಂದ ಹಿಡಿದು ಸ್ನಾತಕೋತ್ತರದ ತನಕ ಕನ್ನಡದಲ್ಲೇ ಇರಲಿ ಎನ್ನುವಾಗ ಎಲ್ಲರಿಗೂ ಇಂಗ್ಲೀಷ್ ಭಾಷೆಯನ್ನು ಈಗ ಕಲಿಸುವುದಕ್ಕಿಂತ ಚೆನ್ನಾಗಿ ಕಲಿಸಬೇಕು ಎನ್ನಬೇಕು. ಇಂಗ್ಲೀಷ್ ತಿಳಿಯದ ಚೀನೀ ವಿದ್ಯಾರ್ಥಿಗಳು ಅಮೆರಿಕನ್ ಯೂನಿವರ್ಸಿಟಿಗಳಿಗೆ ಬಂದು ಅದೆಷ್ಟು ಬೇಗ ಇಂಗ್ಲೀಷ್ ಕಲಿತು ಎಲ್ಲರನ್ನೂ ಮೀರಿಸುತ್ತಾರಲ್ಲವೇ? ವಿಷಯಗಳನ್ನು ಆಳವಾಗಿ ತಿಳಿದವರು, ಆರು ತಿಂಗಳಲ್ಲಿ ಇನ್ನೊಂದು ಭಾಷೆ ಕಲಿತು ಅದರಲ್ಲೂ ವಿಷಯಗ್ರಹಣ ಮಾಡಬಲ್ಲರು. ಹೀಗೆ ವಾದಿಸುವಾಗ ನಾವು ನಮ್ಮ ಜಾತಿ ವರ್ಗ ಭೇದಗಳ ಸಮಾಜದಲ್ಲಿ ಪ್ರಜಾತಂತ್ರಕ್ಕೆ ಅಗತ್ಯವಾದ ಸಮಾನತೆಗಾಗಿ - ನಾವು ನಮಗೇ ಕೊಟ್ಟುಕೊಂಡಿರುವ ಸಂವಿಧಾನದ ಆಶಯದ ಸಫಲತೆಗಾಗಿ- ಎಲ್ಲ ಶಾಲೆಗಳೂ ಒಂದೇ ತರಹದವಾಗಿರಬೇಕು, ಅವುಗಳಲ್ಲಿ ಮೇಲು ಕೀಳಿರಕೂಡದು ಎಂಬ ಹಠದವರಾಗಿರಬೇಕು. ಮಕ್ಕಳಲ್ಲಿ ಚಿಕ್ಕಂದಿನಲ್ಲಿಯೇ ಕೃತಕವಾದ ಅಸಮಾನತೆಯನ್ನು ಸೃಷ್ಟಿಸುವ ಶಾಲಾ ವ್ಯವಸ್ಥೆಯ ವಿರುದ್ಧ ಯಾರೂ ಚಕಾರವೆತ್ತುತ್ತಿಲ್ಲ. ಆದರೆ ಈ ಅಸಮಾನತೆಯನ್ನು ಪ್ರಯತ್ನಪೂರ್ವಕವಾಗಿ ಸೃಷ್ಟಿಸಿದ ನಂತರ ಮೀಸಲಾತಿಯ ಮುಖಾಂತರ ಅದನ್ನು ತಿದ್ದಬಲ್ಲೆವೆಂದು ನಾವು ಭ್ರಮಿಸುತ್ತೇವೆ. ಇದು ಆತ್ಮವಂಚನೆ ಅಥವಾ ರಾಜಕಾರಣಿಗಳು ವೋಟ್ ಬ್ಯಾಂಕ್‌ಗಳನ್ನು ಸೃಷ್ಟಿಸಿಕೊಳ್ಳುವ ಉಪಾಯ. ಯಾವ ಮೈನಾರಿಟಿಗೂ ಮಕ್ಕಳಲ್ಲಿ ಕೃತಕವಾದ ಅಸಮಾನತೆ ಸೃಷ್ಟಿಸುವ ಅಧಿಕಾರವಿಲ್ಲ. ಅದು ಸಂವಿಧಾನದ ಆಶಯಕ್ಕೆ ವಿರೋಧವಾದದ್ದು.

**ಈ**ಗಿಂದೀಗಲೇ ಇದು ಸಾಧ್ಯವಿಲ್ಲ ಎನ್ನಿ. ಹಾಗಾದರೆ ಇನ್ನೊಂದು ಸೂಚನೆಯಿದೆ. ಎಲ್ಲ ಶಾಲೆಗಳೂ ಉಭಯ ಮಾಧ್ಯಮ ಶಾಲೆಗಳಾಗಲಿ. ಹಲವು ತಾಯಿ ತಂದೆಯರಿಗೆ ತಮ್ಮ ಮಕ್ಕಳು ಮೆಡಿಕಲ್‌ಗೊ, ಎಂಜಿನಿಯರಿಂಗಿಗೊ, ಹೋಗಬೇಕೆಂದೂ ಅನಂತರ ಅಮೆರಿಕಾಕ್ಕೆ ಹೋಗಬೇಕೆಂದು ಆಸೆಯಿರುತ್ತದೆ. ಸೈನ್ಸ್‌ನಲ್ಲಿ ತಾನೇ ಈ ಬಯಕೆಗೆ ಅವಕಾಶವಿರುವುದು? ಹಾಗಿದ್ದರೆ ಅಗತ್ಯವಿದ್ದಲ್ಲಿ ಸೈನ್ಸ್‌ನ್ನು ಇಂಗ್ಲೀಷಲ್ಲಿ ಕಲಿಸಿ, ಉಳಿದೆಲ್ಲ ವಿಷಯಗಳನ್ನೂ, ಸ್ವಂತ ವಿಚಾರಕ್ಕೆ ಹೆಚ್ಚು ಆಸ್ಪದವಿರುವ ಮಾನವಶಾಸ್ತ್ರಕ್ಕೆ ಸಂಬಂಧಪಟ್ಟ ಎಲ್ಲವನ್ನೂ, ಕನ್ನಡದಲ್ಲಿ ಕಲಿಸಿ.

ವಿದ್ಯಾಭ್ಯಾಸದ ಕೊನೆಯ ಹಂತದವರೆಗೆ ಹೀಗೆ ಕಲಿಸುವುದಕ್ಕೆ ವಿರೋಧವಿದೆ ಎನ್ನಿ. ಹಾಗಿದ್ದಲ್ಲಿ ಹತ್ತನೇ ಇಯತ್ತೆಯ ತನಕವಾದರೂ, ಕನ್ನಡ ಮಾಧ್ಯಮವಾಗಬೇಕು; ಇಂಗ್ಲೀಷಿಗೆ





ಒತ್ತಡವಿದ್ದಲ್ಲಿ ಉಭಯ ಮಾಧ್ಯಮ ಜಾರಿಗೆ ಬರಬೇಕು. ಇದಕ್ಕಿಂತ ನಾವು ಹಿಂದೆ ಸರಿಯಲೇ ಕೂಡದು.

ಎಲ್ಲ ವಿದ್ಯಾರ್ಥಿಗಳ ಮಾಧ್ಯಮ ಹೀಗೆ ದೇಶದ ಭಾಷೆಯಾದ ಕನ್ನಡವಾದಲ್ಲಿ, ಇಂಗ್ಲೀಷಿನ ಜೊತೆಯಲ್ಲೇ ಎಲ್ಲರೂ ತಮ್ಮ ಮನೆಗಳ ಸಂಸ್ಕೃತಿಗೆ ಅಗತ್ಯವಾದ ಯಾವ ಭಾಷೆಯನ್ನಾದರೂ ಕಲಿಯಲಿಕ್ಕೆ ಅವಕಾಶವಿದ್ದೇ ಇರುತ್ತದೆ. ಕೆಲವರು ಕನ್ನಡವನ್ನು ತಮ್ಮ ಕಲಿಕೆಯ ಭಾಷೆಯಾಗಿ ಆಯುವುದಿಲ್ಲ ಎಂದಾಗಲೂ ನಾವು ವಿರೋಧಿಸಬೇಕಾಗಿಲ್ಲ. ಮಾಧ್ಯಮ ಕನ್ನಡವಾಗಿದ್ದ ಪಕ್ಷದಲ್ಲಿ ಯಾವ ಎರಡು ಭಾಷೆಗಳನ್ನಾದರೂ ಆಯುವ ಸ್ವಾತಂತ್ರ್ಯವನ್ನು ನಾವು ವಿದ್ಯಾರ್ಥಿಗಳಿಗೆ ಕೊಡಬಹುದು. ಯಾವ ಭಾಷೆಯನ್ನೇ ಆಗಲಿ, ಅದನ್ನು ಸಮರ್ಥವಾಗಿ ಓದಲು, ಬರೆಯಲು, ಮಾತಾಡಲು, ಅದರಲ್ಲಿ ಗ್ರಹಿಸಲು, ಕಲಿಸಬೇಕು.

ಆದರೆ ಮಾತ್ರ ವಿದ್ಯಾರ್ಥಿ ಯಾವ ಭಾಷೆಯನ್ನೇ ಆಯಲಿ, ಕನ್ನಡನಾಡಿನ ಎಲ್ಲ ವಿದ್ಯಾರ್ಥಿಗಳಿಗೂ ಈ ನಾಡಿನ ಸಾಹಿತ್ಯ ಸಂಸ್ಕೃತಿಯ ಪರಿಚಯವಾದರೂ ಇರಲೇಬೇಕು. ಇವತ್ತು ಶೇಕ್ಸ್‌ಪಿಯರಿನ ಯಾವೊಂದು ನಾಟಕದ ನೂರು ಪ್ರತಿಗಳು ಮಾರಾಟವಾದಲ್ಲಿ ಅವುಗಳಲ್ಲಿ ೯೯ ಖಂಡಿತವಾಗಿ ಪಠ್ಯವಾದ್ದರಿಂದ. ಇಂಗ್ಲೆಂಡ್ ಹೀಗೆ ತನ್ನ ಪೂರ್ವದ ಹಿರಿಯರ ನೆನಪನ್ನು ಒಂದು ಸಾಂಸ್ಕೃತಿಕ ಪಾಲಿಸಿಯಾಗಿ ಉಳಿಸಿಕೊಂಡು ಬಂದಿದೆ. ಪಾಶ್ಚಿಮಾತ್ಯರೆಲ್ಲರೂ ತಮ್ಮ ಪೂರ್ವಿಕರನ್ನು ಹೀಗೆ ಉಳಿಸಿಕೊಂಡೇ ಬಂದಿದ್ದಾರೆ - ಅಷ್ಟೇ ಅಲ್ಲ, ಅವರನ್ನು ಉಳಿಸಿಕೊಳ್ಳುವುದು ಭಾರತದ ಜವಾಬ್ದಾರಿ ಎಂದು ತಿಳಿಯುವಂತೆ ನಮ್ಮ ಮನಸ್ಸನ್ನೂ ತಿದ್ದಿದ್ದಾರೆ! ಶೇಕ್ಸ್‌ಪಿಯರ್ ಕಲಿಕೆ ತನ್ನ ದೇಶದಲ್ಲಿ ಸ್ವಲ್ಪ ಹಿಮ್ಮಟ್ಟಿತೆಂದು ಇಂಗ್ಲೆಂಡಿನ ರಾಜಕುಮಾರ ತನ್ನ ದೇಶದ ವಿದ್ಯಾಸಂಸ್ಥೆಗಳನ್ನು ತರಾಟೆಗೆ ತೆಗೆದುಕೊಂಡಿದ್ದಾನೆ. ಹೀಗೆ ಇಡೀ ಭಾರತಕ್ಕೂ ಮತ್ತು ಪ್ರತಿ ದೇಶೀಯ ಸಂಸ್ಕೃತಿಗೂ ಅನ್ವಯವಾಗುವಂತಹ ಒಂದು ಸ್ಥೂಲವಾದ ಸಾಂಸ್ಕೃತಿಕ ಪಾಲಿಸಿಯ ಅಗತ್ಯ ಇದೆ. ಅನೇಕತೆಯಲ್ಲಿ ಏಕತೆ ನೈಜವಾಗಿ, ನಮ್ಮ ಆಧುನಿಕ ಯುಗದಲ್ಲೂ, ಉಳಿಯುವುದು ಈ ಬಗೆಯ ಒಂದು ಪಾಲಿಸಿ ಇದ್ದಾಗ.

**ಯಾ**ಕೆಂದರೆ ನಮ್ಮ ಸಂಸ್ಕೃತಿಗಳನ್ನು ಈ ತನಕ ಉಳಿಸಿಕೊಂಡು ಬಂದಿರುವುದು, ವಿಪರ್ಯಾಸವೆಂದರೆ, ಅನಕ್ಷರತೆ ಮತ್ತು ಹಿಂದುಳಿದಿರುವಿಕೆ. ನಮ್ಮನ್ನು ಈ ತನಕ ಆಳಿದವರಿಗೂ, ಕಾಣದಂತೆ ಆಳುತ್ತಿರುವವರಿಗೂ ಅನಕ್ಷರತೆ ಮತ್ತು ಬಡತನದಿಂದಾಗಿ ನಮ್ಮ ಜನ ಅಗಮ್ಯರಾಗಿಯೇ ಹೊರಗುಳಿದಿದ್ದಾರೆ. ಆದರೆ ಇದು ಅಸಹ್ಯವಾದ ಸ್ಥಿತಿಯೂ ಹೌದು. ಈ ಅಸಹ್ಯದಿಂದ ನಮ್ಮ ಜನ ಮೇಲೇಳುವಾಗ, ಸಾಕ್ಷರತೆಯಲ್ಲಿ ಸುಖ ಜೀವನದ ಭರವಸೆ ಕಾಣುವಾಗ, ಇಲ್ಲಿಯತನಕ ಅವರ ಕುಟುಂಬ ಪ್ರಜ್ಞೆಯನ್ನು ಉಳಿಸಿ, ಅವರ ನಿತ್ಯದ ಖುಷಿಗಳಿಗೆ ಕಾರಣವಾಗಿ, ಹಲವು ಅವಮಾನಗಳ ನಡುವೆಯೂ ಅವರ ಮಾನವತೆಯನ್ನು ಯಾವುದು ಕಾಯ್ದಿತ್ತೊ, ಅದು, ಸಾಕ್ಷರತೆ ಮತ್ತು ತಾಂತ್ರಿಕತೆ ಕೂಡಿ ತರುವ ಅನುಕರಣದ ಪ್ರಲೋಭನೆಯಲ್ಲಿ, ವಿಸ್ಮೃತಿಗೆ ಒಳಗಾಗದಂತೆ ಎಚ್ಚರವಹಿಸುವುದು ಅಗತ್ಯ.

ನಮ್ಮ ಸಂಸ್ಕೃತಿಯಲ್ಲಿ ಏನೇನನ್ನು ಎಷ್ಟು ತೀವ್ರತೆಯಲ್ಲಿ, ಎಷ್ಟು ವ್ಯಾಪಕತೆಯಲ್ಲಿ ಉಳಿಸಿಕೊಳ್ಳಬೇಕೆಂಬ ವಾಗ್ವಾದವೇ ಎಲ್ಲ ಸಾಹಿತ್ಯ ವಿಮರ್ಶೆಯ ಜೀವಾಳ. ಅದು ಕನ್ನಡದಲ್ಲಿ ಈಗ ನಡೆಯುತ್ತಿದೆಯಾದ್ದರಿಂದ ನಾವು ಪೂರ್ಣ ಸಾಕ್ಷರತೆಯಲ್ಲಿ ಪಡೆಯಲು ಬಯಸುವ ನಾಡ ಕಲ್ಪನೆಗೊಂದು ಸ್ಪಷ್ಟತೆಯೂ ದಿಕ್ಕೂ ಒದಗುತ್ತದೆ. ಜನರಂಜಕ ಮಂಕು ಬೂದಿಯ ರಾಜಕೀಯಕ್ಕೂ, ನಮ್ಮ ಮಾಧ್ಯಮಗಳ ಅಲ್ಪ ಮನರಂಜನೆಗೂ ಅನಕ್ಷರಸ್ಥರಾಗುವ ಜನ ಬಾಯಿಕಳಕೊಂಡ ಗ್ರಾಹಕರಾಗದಿರಲು ಈ ಚಳವಳಿ ಅಗತ್ಯ. ಪತ್ರಕರ್ತರು, ನಾಟಕಕಾರರು, ಕವಿಗಳು, ಕಥೆಗಾರರು, ಹರಿಕಥೆಯವರು, ಸಿನಿಮಾ, ಯಕ್ಷಗಾನ, ಬಯಲಾಟ ಕಲಾವಿದರು ಈ ಬಗೆಯ ಸಾರವಾದ ಸಂಸ್ಕೃತಿಯ ಪ್ರಸಾರದಲ್ಲಿ ತೊಡಗಬೇಕು.

**ಯಾ**ಕೆಂದರೆ ದೂರದರ್ಶನದಂಥಹ ಮಾಧ್ಯಮದ ಅಪಾಯ ಈಗಿಂದೀಗಲೇ ನಮಗೆ ಎದುರಾಗಿದೆ. ಹಿಂದಿಯಲ್ಲಿನ ಕಚಡಾ ಚಿತ್ರಗಳು ಕನ್ನಡದಲ್ಲಿ ಡಬ್ಬಾಗಿ ಬರಲಿವೆ. ರಾಜಕೀಯ ಬಲವಿರುವಂತೆ ಕಾಣುವ ಟಿಪ್ಪೂ ಚಿತ್ರ ಕನ್ನಡಕ್ಕೆ ಈಗಾಗಲೇ ಡಬ್ಬಾಗುತ್ತಿದೆ. ಇವನ್ನು ಸರ್ವಥಾ ನಾವು ಆಗದಂತೆ ತಡೆಯಬೇಕು. ಪರಭಾಷೆಯ ಚಿತ್ರ ಸಾಂಸ್ಕೃತಿಕವಾಗಿ ಕಲಾತ್ಮಕವಾಗಿ ಉತ್ತಮವಾದಲ್ಲಿ ಕನ್ನಡದ ಸಬ್ ಟೈಟಲ್ ಪಡೆದು ಅವು ಪ್ರದರ್ಶಿತವಾಗಲಿ. ಹಾಗೆಯೇ ಕನ್ನಡಿಗರ ಕುವೆಂಪು, ಕಾರಂತ, ರಾವಬಹದ್ದೂರ್, ಮಾಸ್ತಿ ಇವರ ಘನವಾದ ಕೃತಿಗಳು ಕನ್ನಡದಲ್ಲಿ ಸೀರಿಯಲ್ಲಾಗಲಿ. ಈ ಸೀರಿಯಲ್ಲುಗಳು ಹಿಂದಿ, ತಮಿಳು, ಬಂಗಾಳಿ ಯಾವ ಜನಕ್ಕಾದರೂ ಅವರ ಭಾಷೆಗಳ ಸಬ್‌ಟೈಟಲ್ ಪಡೆದು ಪ್ರದರ್ಶಿತವಾಗಲಿ. ಇದೇ ಸರಿಯಾದ, ಅನೇಕತೆಯಲ್ಲಿ ಏಕತೆ ಸಾಧಿಸುವ, ಸೂತ್ರ.

**ಯಾ**ಕೆಂದರೆ ಕೀಳು ಮಟ್ಟದ ಚಿತ್ರಗಳು ನಮ್ಮ ಭಾಷೆಗೆ ಡಬ್ಬೂ ಆದರೆ ಅವುಗಳು ಆಕ್ರಮಿಸುವುದು ಪೋಲಿಗಳಂತೆ ಹೊರ ಬೀದಿಗಳನ್ನಲ್ಲ, ನಮ್ಮ ನಮ್ಮ ಆಪ್ತ ಜೀವನದ ವಿಶ್ರಾಂತಿಯ ನಡುಮನೆಯನ್ನು, ಪರಭಾಷೆಯ ಅಜ್ಞಾನದಿಂದಲಾದರೂ ಕೀಳಿನ ಗೀಳನ್ನು ಬೆಳೆಸಿಕೊಳ್ಳದ ಸಾಮಾನ್ಯರ ಸಹಜವಾದ ಸ್ವರಕ್ಷಣಾ

ಶಕ್ತಿಯನ್ನು ಹೀಗೆ, ಕಣ್ಣಿನ ಮೂಲಕವಲ್ಲ ಕಿವಿಗಳ ಮೂಲಕವೂ, ಹೊಕ್ಕು ಭೇದಿಸುವುದು ಅಕ್ಷಮ್ಯ ಅಪರಾಧ.

ಕನ್ನಡದ ಅಭಿಮಾನಿಗಳಾದ ನಾವೆಲ್ಲರೂ ನೆಲ ಜಲ ಉದ್ಯೋಗದ ಪ್ರಶ್ನೆಗಳನ್ನು ಎತ್ತಿಕೊಳ್ಳುತ್ತಿದ್ದಂತೆಯೇ, ಅದರ ಜೊತೆಯಲ್ಲೇ, ಇಡೀ ಕನ್ನಡನಾಡನ್ನ ಸುಸಂಸ್ಕೃತ ಅಕ್ಷರಸ್ಥರನ್ನಾಗಿ ಮಾಡುವ ಹಠದ ಸೈನ್ಯವಾಗಬೇಕು. ಕನ್ನಡ ಶಕ್ತಿ ಕೇಂದ್ರ ಹೀಗೆ ಅಕ್ಷರ ಸೈನ್ಯವೂ ಆಗಿ ಕೆಲಸ ಮಾಡಲಿ ಎಂದು ಕೋರುತ್ತೇನೆ. ಆಗ ಉಳಿದ ಎಲ್ಲ ಚಳವಳಿಗಳಿಗೂ ಅರ್ಥ ಬರುತ್ತದೆ. ಇದೇ ಗಾಂಧಿ ನಮಗೆ ತೋರಿಸಿದ ಮಾದರಿ. ಬ್ರಿಟಿಷರನ್ನು ಓಡಿಸುವುದು ಅವರಿಗೆಷ್ಟು ಮುಖ್ಯವಾಗಿತ್ತೋ, ಹರಿಜನ, ಖಾದಿ ಆಂದೋಳನಗಳೂ ಅಷ್ಟೇ ಮುಖ್ಯವಾಯಿತು. ಅವರಿಗೆ. ಅಥವಾ ಹೀಗೂ ಹೇಳಬಹುದು : ಹರಿಜನರ ಪ್ರಶ್ನೆಯನ್ನೂ ಸ್ವದೇಶಿ ಪ್ರಶ್ನೆಯನ್ನೂ ಅವರು ಎತ್ತಿಕೊಳ್ಳದಿದ್ದಲ್ಲಿ ಸ್ವಾತಂತ್ರ್ಯದ ಹೋರಾಟ ಬಾಯಿ ಬಡುಕ ಪುಢಾರಿಗಳನ್ನೋ, ಅಥವಾ ಆತಂಕವಾದಿ ಹುಂಬರನ್ನೋ ಮಾತ್ರ ಸೃಷ್ಟಿಸುತ್ತಿತ್ತು. ಎಲ್ಲ ಭಾಷಾ ಚಳವಳಿಗಳಿಗೂ ಹೀಗಾಗುವ ಅಪಾಯವಿದೆಯೆಂಬುದನ್ನು ಎಲ್ಲೆಲ್ಲೂ ನಾವು ನೋಡುತ್ತಿರುವವಾದ್ದರಿಂದ ಕನ್ನಡ ಶಕ್ತಿ ಕೇಂದ್ರ ಅಕ್ಷರ ಪ್ರಸಾರದ ಒಂದು ಸ್ವಯಂ ಸೇವಕ ಪಡೆಯನ್ನು ಕಟ್ಟಬೇಕೆಂದು ನಾನು ಆಸೆಪಡುತ್ತಿದ್ದೇನೆ. ●

ನಿಮಗಿದು ತಿಳಿದಿರಲಿ

## ಕರ್ನಾಟಕ

- ಭಾರತದ ಪ್ರಪ್ರಥಮ ಜಲಾಶಯ - ಕೃಷ್ಣರಾಜ ಸಾಗರ (ಕನ್ನಂಬಾಡಿ ಆಣೆಕಟ್ಟೆ)
- ಏಷ್ಯಾದಲ್ಲೇ ಮೊಟ್ಟ ಮೊದಲ ಜಲ ವಿದ್ಯುತ್ ಕೇಂದ್ರ - ಶಿವನ ಸಮುದ್ರ
- ಭಾರತದ ಅತ್ಯಂತ ಎತ್ತರವಾದ ಜಲಪಾತ - ಜೋಗ ಜಲಪಾತ
- ಜಗತ್ತಿನಲ್ಲಿ ಅತ್ಯಂತ ಆಳವಾದ ಚಿನ್ನದ ಗಣಿ - ಕೋಲಾರ ಚಿನ್ನದ ಗಣಿ
- ಭಾರತದ ಎರಡು ಚಿನ್ನದ ಗಣಿಗಳು ಕರ್ನಾಟಕದಲ್ಲಿ - ಹಟ್ಟಿ ಮತ್ತು ಕೋಲಾರ ಚಿನ್ನದ ಗಣಿ
- ಕರ್ನಾಟಕ ಸಂಗೀತದಲ್ಲಿ ಪ್ರಸಿದ್ಧರಾದವರು ಬಿಡಾರಂ ಕೃಷ್ಣಪ್ಪ, ದೇವೇಂದ್ರಪ್ಪ, ವೀಣೆ ಶೇಷಣ್ಣ, ಟಿ. ಚೌಡಯ್ಯ, ವಾಸುದೇವಾಚಾರ್ಯ, ದೊರೆಸ್ವಾಮಿ ಅಯ್ಯಂಗಾರ್ ಮುಂತಾದವರು.
- ಹಿಂದುಸ್ತಾನಿ ಸಂಗೀತದಲ್ಲಿ ಪಂಡಿತ ಭೀಮಸೇನ ಜೋಷಿ, ಮಲ್ಲಿಕಾರ್ಜುನ ಮನ್ಸೂರ್, ಬಸವರಾಜ ರಾಜಗುರು, ಗಂಗೂಬಾಯಿ ಹಾನಗಲ್, ಕುಮಾರ ಗಂಧರ್ವ, ದೇವೇಂದ್ರ ಮುರುಡೇಶ್ವರ ಮುಂತಾದವರು ಕಿರೀಟ ಪ್ರಾಯರಾಗಿದ್ದಾರೆ.
- ಜ್ಞಾನಪೀಠ ಪ್ರಶಸ್ತಿಗಳ ಪೈಕಿ ೭ ಕನ್ನಡಿಗರಿಗೆ - ಡಾ. ಕುವೆಂಪು, ದ.ರಾ. ಬೇಂದ್ರೆ, ಡಾ. ಕೆ. ಶಿವರಾಮ ಕಾರಂತ, ಡಾ. ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡಾ. ವಿ.ಕೃ. ಗೋಕಾಕ್ ಹಾಗೂ ಡಾ. ಯು.ಆರ್. ಅನಂತಮೂರ್ತಿ
- ಕೈಗಾರೀಕರಣದ ಮುತ್ಸದ್ದಿಯಾಗಿ ಸರ್. ಎಂ. ವಿಶ್ವೇಶ್ವರಯ್ಯನವರು ಧ್ರುವತಾರೆ
- ೧೯೯೫ರ ಪ್ರತಿಷ್ಠಿತ ದಾದಾಸಾಹೇಬ ಫಾಲ್ಕೆ ಪ್ರಶಸ್ತಿ ವಿಜೇತ ಕನ್ನಡದ ವರನಟ 'ಕರ್ನಾಟಕ ರತ್ನ' ಡಾ. ರಾಜ್‌ಕುಮಾರ್
- ನಾಟಕ ಕ್ಷೇತ್ರಕ್ಕೆ ವಿಶಿಷ್ಟ ಸೇವೆ ಸಲ್ಲಿಸಿದ ಮಹಾನ್ ಕಲಾವಿದರು 'ನಾಟಕರತ್ನ' ಗುಬ್ಬಿ ವೀರಣ್ಣನವರು
- ವಿಶ್ವದ ಏಳು ಅದ್ಭುತಗಳಲ್ಲೊಂದು - ಬಿಜಾಪುರದ ಗೋಲ್ ಗುಂಬಜ್
- ಭಾರತ ಸೇನೆಯ ಪ್ರಥಮ ಮಹಾ ದಂಡನಾಯಕ ಜನರಲ್ ಕಾರ್ಯಪ್ಪ ಕನ್ನಡಿಗರು
- ರಾಷ್ಟ್ರೀಕೃತಗೊಂಡ ೨೦ ಬ್ಯಾಂಕುಗಳಲ್ಲಿ ೪ ಕರ್ನಾಟಕದ್ದು, ಸಿಂಡಿಕೇಟ್ ಬ್ಯಾಂಕ್, ಕೆನರಾ ಬ್ಯಾಂಕ್, ವಿಜಯಾ ಬ್ಯಾಂಕ್ ಮತ್ತು ಕಾರ್ಪೊರೇಷನ್ ಬ್ಯಾಂಕ್
- ವಿಶ್ವದಲ್ಲೇ ಅತಿ ಹೆಚ್ಚಿನ ತಳಿಗಳಿರುವ ತೋಟ - ಲಾಲ್‌ಬಾಗ್
- ಏಷ್ಯಾದಲ್ಲೇ ಅತಿ ಹೆಚ್ಚಿನ ತಳಿಯಿರುವ ಮೃಗಾಲಯ - ಮೈಸೂರು ಮೃಗಾಲಯ
- ಭಾರತದ ಏಕೈಕ ಹೆಸರಾಂತ ಬಹುವಾದ್ಯ ಪ್ರವೀಣ ಹಾಗೂ ಗಾನವಿಶಾರದ ಬಿ. ದೇವೇಂದ್ರಪ್ಪ
- ಭಾರತದ ಮಾಜಿ ಪ್ರಧಾನಿ ಹೆಚ್.ಡಿ. ದೇವೇಗೌಡ ಅವರು ಕನ್ನಡಿಗರು
- ಭಾರತದ ಖ್ಯಾತ ಖಗೋಳ ವಿಜ್ಞಾನಿ ಡಾ. ಯು.ಆರ್. ರಾವ್ ಕನ್ನಡಿಗರು
- ಕರ್ನಾಟಕದ ಇಬ್ಬರು ರಾಜ್ಯಪಾಲರು ರಾಷ್ಟ್ರಪತಿ, ಉಪರಾಷ್ಟ್ರಪತಿಗಳಾಗಿದ್ದರು - ವಿ.ವಿ. ಗಿರಿ, ಬಿ.ಡಿ. ಜತ್ತಿ
- ಭಾರತೀಯ ಚಲನಚಿತ್ರರಂಗಕ್ಕೆ ಹೆಚ್ಚು ಸಾಹಿತ್ಯ ನೀಡಿದವರು - ದಿ. ಚಿ. ಉದಯ ಶಂಕರ್





# ತ್ರಿವಿಧ ದಾಸೋಹದ ಮಹಾಸಂಗಮ : ಸಿದ್ಧಗಂಗೆ

- ಕೆ.ಎನ್. ಶಿವರಾಜ್

ಪ್ರಸಿದ್ಧ ಪುಣ್ಯಕ್ಷೇತ್ರಗಳಲ್ಲಿ ಒಂದಾದ 'ಸಿದ್ಧಗಂಗಾ' ನಾಡಿನ ಶೈಕ್ಷಣಿಕ, ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳಲ್ಲಿ ಕಳೆದ ಅನೇಕ ದಶಕಗಳಿಂದ ತನ್ನದೇ ಆದ ಅಮೂಲ್ಯ ಕೊಡುಗೆಯನ್ನು ಸಲ್ಲಿಸುತ್ತಾ ಬಂದಿದೆ. ಸಾವಿರಾರು ಬಡ, ದೀನ-ದಲಿತ ಮಕ್ಕಳಿಗೆ ಆಶ್ರಯ ನೀಡಿ ಅನ್ನದಾನದ ಜೊತೆಗೆ ವಿದ್ಯಾದಾನವನ್ನು ನೀಡುತ್ತಾ ಬಂದಿದೆ. ಪ್ರಸ್ತುತ ೫,೫೦೦ ವಿದ್ಯಾರ್ಥಿಗಳಿಗೆ ಶ್ರೀಕ್ಷೇತ್ರ ಆಶ್ರಯ ನೀಡಿದೆ. ತ್ರಿವಿಧ ದಾಸೋಹಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಸಮಾಜದ ಸರ್ವತೋಮುಖ ಅಭಿವೃದ್ಧಿಗೆ ಅಮೂಲ್ಯ ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಶ್ರೀಕ್ಷೇತ್ರದ ಒಂದು ವಿಹಂಗಮ ನೋಟ ಇಲ್ಲಿದೆ.

ಇದು ಸುಕ್ಷೇತ್ರ. ಸಿದ್ಧಗಂಗಾ ಮಹಾಕ್ಷೇತ್ರ. ತ್ರಿವಿಧ ದಾಸೋಹಗಳ ಸಂಗಮಕ್ಷೇತ್ರ. ಅನ್ನ-ಧರ್ಮ-ಜ್ಞಾನ. ನೋಡಿಯೂ ನಂಬಲಾಗದಷ್ಟು ವಿಸ್ತೃತ ಅದರ ಕಾರ್ಯಕ್ಷೇತ್ರ. ಲಕ್ಷಾಂತರ ವಿದ್ಯಾರ್ಥಿಗಳಿಗೆ ಆಶ್ರಯ ನೀಡಿದ, ನೀಡುತ್ತಿರುವ 'ದೊಡ್ಡ ಕಾರ್ಯಾಗಾರ'. ಇಲ್ಲಿನ ಕೆಲಸ ಅತ್ಯುತ್ತಮವಾದುದು ಎಂಬ ಪ್ರಶಂಸೆ. "ಇಲ್ಲಿನ ಕೆಲಸಗಳು ಇತರರಿಗೆ ಮಾದರಿ". ಮಹಾದಾಸೋಹಿ ಪರಮಪೂಜ್ಯ ಸ್ವಾಮೀಜಿಯವರ ಸರ್ವಾರ್ಪಣೆಯ ಸಾಕಾರ ಮೂರ್ತಿ. ಸಾರ್ವಜನಿಕರ ಆತ್ಮೀಯ ಬಂಧು. ಕೀಳು ಮೇಲೆಣಿಸದ ಉದಾತ್ತ ಜೀವಿ.

**ಅರವತ್ತೆರಡು ಕೋಮುಗಳು**

ಪರಮಪೂಜ್ಯರು ಕೈಗೊಂಡಿರುವ ನೂರಾರು ಸೇವಾಕಾರ್ಯಗಳಲ್ಲಿ ಅವವಿಗೆ ಅತ್ಯಂತ ಪ್ರಿಯವಾದುದು ಅನ್ನ ದಾಸೋಹ. ಹಸಿದು ಬಂದವರಿಗೆ ಅಶನವಲ್ಲದೆ ಮತ್ತೇನು ತಾನೆ ತೃಪ್ತಿ ಕೊಟ್ಟೀತು! ಕೋಟಿ ರೊಕ್ಕವಿದ್ದರೂ ತುಣುಕು ರೊಟ್ಟಿ ಇದ್ದಂತಾದೀತೆ? ಉದ್ದಾನ ಶ್ರೀಶ್ರೀಗಳವರಿಂದ ಕಿರಿದಾಗಿ ಪ್ರಾರಂಭಿಸಲ್ಪಟ್ಟ ವಿದ್ಯಾರ್ಥಿ ನಿಲಯ ಇಂದು ಬೃಹತ್ತಾಗಿ ಬೆಳೆದು ಸಾವಿರಾರು ವಿದ್ಯಾರ್ಥಿಗಳಿಗೆ ಆಶ್ರಯ ನೀಡುತ್ತಿರುವ ವಿದ್ಯಾರ್ಥಿನಿಲಯ ಹಿಂದಿನ ಗುರುಕುಲದ ನೆನಪನ್ನು ತರುತ್ತದೆ. ಶ್ರೀಗಳವರ ಔದಾರ್ಯ, ಹೃದಯ ವೈಶಾಲ್ಯಗಳಿಗೆ ಇದು ನಿದರ್ಶನ. ಆರಂಭದ ದಿನದಿಂದಲೂ ಎಲ್ಲ ಮತೀಯರಿಗೆ, ಸರ್ವಕೋಮುಗಳ ವಿದ್ಯಾರ್ಥಿಗಳಿಗೆ ಇಲ್ಲಿ ಆಶ್ರಯ. ಆಗಿನ್ನೂ ಸರ್ಕಾರ ಕೋಮುವಾರು ನಿಲಯಗಳನ್ನು ಮಾನ್ಯತೆ ಮಾಡುವ, ಸಹಾಯ ನೀಡುವ ನೀತಿಯನ್ನು ಹೊಂದಿತ್ತು. ಇಂದಿಗೂ ಈ ಆದರ್ಶವು ಅರಳುತ್ತಲೇ ಇದೆ. ತನ್ನ ಸುಮಧುರ ಸುವಾಸನೆಯುನ್ನು ಬೀರುತ್ತಲೇ ಇದೆ - ದೂರ, ದೂರ! ಇಂದು ಒಂದಲ್ಲ - ಎರಡಲ್ಲ ೬೨ ವಿವಿಧ ಕೋಮುಗಳ ೫೫೦೦ ಮಂದಿ ವಿದ್ಯಾರ್ಥಿಗಳಿಗೆ ಅಶನ-ವಸತಿಗಳು ಉಚಿತ. ಕೋಮು ಭಾವನೆಗೆ ಬೇರೆಯವರು ನೀರೆರದರೂ ಚಿಗುರದೆ ಹೋದುದು ಇದೀಗ ಸ್ಪಷ್ಟವಾಗಿದೆ. ಸಹಸ್ರ



ಶ್ರೀ ಕ್ಷೇತ್ರದ ಆರಾಧ್ಯ ದೈವ ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಹಾಗೂ ಸಿದ್ಧಗಂಗಾ ಮಾತೆ ನೆಲಸಿರುವ ತಾಣ



ಶ್ರೀ ಉದ್ದಾನ ಶಿವಯೋಗಿಗಳು

ಸಂಖ್ಯೆಯಲ್ಲಿ ಕಲೆತು ಬೆರೆತು ನಲಿದು ನರ್ತಿಸುವ ದೃಶ್ಯ ಮನೋಹರ. ಕಂಡು ಆನಂದಿಸಲು ಹೃದಯ ವೈಶಾಲ್ಯ ಬೇಕು.

**ಪ್ರಸಾದ ತಗೊಳ್ಳಿ**

ಸಂದರ್ಶಕರು ನಾನಾ ರೀತಿ ಭಕ್ತರು, ಯಾತ್ರಾರ್ಥಿಗಳು, ಪೋಷಕರು, ಪ್ರೇಕ್ಷಕರು. ಸರ್ವರಿಗೂ ಆಕರ್ಷಣೆ ಉಂಟು. ಕ್ಷೇತ್ರದ ಸತ್ಸಂಪ್ರದಾಯ - ಬಂದವರು ಪ್ರಸಾದ ಸ್ವೀಕರಿಸಿಯೇ ಹಿಂತಿರುಗಬೇಕು. "ಪ್ರಸಾದ ತಗೊಳ್ಳಿ" ಎಂಬುದು ಸ್ವಾಮೀಜಿಯವರ ಷಡಕ್ಷರ ಮಂತ್ರವೇನೋ? ದಿನಕ್ಕೆ ಸುಮಾರು ಎರಡು ಸಾವಿರ ಮಂದಿ. ಸ್ವೀಕರಿಸಿದ ಪ್ರಸಾದ ಹಸಿವೆಯನ್ನು ಹಿಂಗಿಸುವುದು ಮಾತ್ರವಲ್ಲ, ಗುರುವಿನ ಅನುಗ್ರಹವನ್ನು ತಂದು ಕೊಡುತ್ತದೆ. ತೃಪ್ತಿ ದೊರಕಿಸುತ್ತದೆ. ಧನ್ಯತೆ ನಮ್ಮದಾಗುತ್ತದೆ.

**ದಿನವೊಂದರ ಲೆಕ್ಕ**

ಇದು ಏನು? ಅಡುಗೆ ಮನೆಯಲ್ಲಿ! ದೊಡ್ಡ ಪ್ರಮಾಣದ ಕಾರ್ಖಾನೆ; ಪರಮಾತ್ಮ ಕರುಣೆಯ ಮಹಾಮನೆ. ದಾಸೋಹ ವ್ಯವಸ್ಥೆಗೆ ತಗಲುವ ವೆಚ್ಚ ೫೫೦೦ ವಿದ್ಯಾರ್ಥಿಗಳ ಎರಡು ಹೊತ್ತಿನ ಊಟ, ಮಧ್ಯಾಹ್ನದ ಉಪಹಾರ ಮತ್ತು ಪ್ರತಿದಿನ ಬರುವ ಭಕ್ತರಿಗೆ ಹಬ್ಬ ಹರಿದಿನಗಳನ್ನು ಬಿಟ್ಟು ದಿನವೊಂದಕ್ಕೆ : ೨೪ ಕ್ವಿಂಟಾಲ್ ಅಕ್ಕಿ, ೧೧ ಕ್ವಿಂಟಾಲ್ ರಾಗಿ, ೪ ಕ್ವಿಂಟಾಲ್ ತರಕಾರಿ, ೧ ಕ್ವಿಂಟಾಲ್ ಉಪ್ಪು, ೮೦ ಕೆಜಿ ಸಾಂಬಾರ ಪುಡಿ, ೩ ಕ್ವಿಂಟಾಲ್ ಈರುಳ್ಳಿ, ೨ ಕ್ವಿಂಟಾಲ್ ರವೆ, ೨ ಕ್ವಿಂಟಾಲ್ ತೊಗರಿಬೇಳೆ, ೨೫೦ ತೆಂಗಿನಕಾಯಿ, ೨೦೦ ಲೀಟರ್ ಹಾಲು (ಮಜ್ಜಿಗೆಗೆ), ೩ ಟಿನ್ ಕಡಲೆಕಾಯಿ ಎಣ್ಣೆ - ಇತ್ಯಾದಿ. ಇದೇನು ಅಕ್ಷಯ ಪಾತ್ರೆಗಳ ಪವಾಡವೇ? ಇಲ್ಲಿನ ದಿನ ಒಂದರ ಸಂಜೆಯ ಲೆಖ್ಖ. ಎಲೆಹೊಂದಿಸಲೂ ಶಕ್ಯವೇ ಎಂದು ಕೇಳುವವರೇ ಅಧಿಕ. ಈ ಅಸಾಮಾನ್ಯ ಕೆಲಸಕ್ಕಾಗಿ ಒಂದು ಸ್ಥಿರ ನಿಧಿ ಇಲ್ಲ. ಅಪಾರ ಆಸ್ತಿ ಇಲ್ಲ. ಎಲ್ಲವೂ ಪೂಜ್ಯರ ಅಹರ್ನಿಶಿ ದುಡಿಮೆಯ ಫಲ; ಮಹಾಜನಗಳ ಬೆಂಬಲ. ಅವರ ಕೊಡುಗೆ, ಅವರಿಗೆ ಭಕ್ತಾದಿಗಳಿಗೇ ವಿನಿಯೋಗ ಎಂಬುದು ಅವರ ದೊಡ್ಡ ಮಾತು.

**ಪ್ರವಾಸ ಪ್ರವಚನ**

ಶ್ರೀಗಳವರ ದುಡಿಮೆಗೆ ದಶದಿಕ್ಕುಗಳು. ಜಗತ್ತು ಚಿರನಿದ್ರೆಯಲ್ಲಿದ್ದಾಗ - ಎರಡೂವರೆ ಘಂಟೆ ರಾತ್ರಿಯಲ್ಲಿ ತಾವು ಏಳುತ್ತಾರೆ. ಅಲ್ಲಿಂದ ಆರಂಭವಾಗಿ ದಿನಕ್ಕೆ ಹತ್ತೊಂಭತ್ತು ಘಂಟೆಗಳ ಅವಿಶ್ರಾಂತ ದುಡಿಮೆ. ವಾರದಲ್ಲಿ ಹದಿನೈದು-ಇಪ್ಪತ್ತು ಸ್ಥಳಗಳಿಗೆ ಪ್ರವಾಸ. ಧರ್ಮೋಪನ್ಯಾಸ. ನಿರರ್ಗಳ ವಿಚಾರ ಧಾರೆ. ಹೃದಯ ಪರಿವರ್ತಿಸುವಂತಹ ಆದರ್ಶ ವಿಷಯಗಳು, ದೇಹಾಲಸ್ಯವನ್ನು ಲೆಕ್ಕಿಸದೆ ಎಷ್ಟೇ ದೂರವಾಗಲೀ ಸೇವೆಗೆ ಸಿದ್ಧರಾಗುವ ಪೂಜ್ಯರ ಏಕಮೇವ ಉದ್ದೇಶ. ಜನತೆಯಲ್ಲಿ ಕ್ಷೀಣಿಸುತ್ತಿರುವ ಧರ್ಮಶ್ರದ್ಧೆ ದೈವಭಕ್ತಿಗಳ ಪುನರುತ್ಥಾನ. ಧರ್ಮದ ಬೀಡು ಭಾರತದಲ್ಲಿ ಧರ್ಮವನ್ನವಲಂಬಿಸದ ಯಾವುದೇ ಯೋಜನೆಯು ಪೂರ್ಣಫಲಕಾರಿ ಯಾಗಲಾರದೆಂಬುದು ಅವರ ವಾದ. ಸತ್ಯದ ಕಟುನುಡಿ. ಧಾರ್ಮಿಕ ಸಂಸ್ಥೆಗಳು, ಸಮ್ಮೇಳನಗಳಿಗೆ ಸರ್ವವಿಧದ ಬೆಂಬಲ-ಪ್ರೋತ್ಸಾಹಗಳನ್ನು ನೀಡುತ್ತಾರೆ. ಅವುಗಳ ಕಾರ್ಯ ಚಟುವಟಿಕೆಗಳನ್ನು ಪರಿಶೀಲಿಸಿ ಸೂಕ್ತ ಮಾಗದರ್ಶನ ನೀಡುತ್ತಾರೆ. ಆಗೊಮ್ಮೆ- ಈಗೊಮ್ಮೆ ನಡೆಯುವ ಪ್ರಸಂಗಗಳಲ್ಲ, ದೈನಂದಿನ ಬದುಕು. ಧರ್ಮ ಕಾರ್ಯಗಳ ಏರ್ಪಾಡುಗಳನ್ನು ಉತ್ತೇಜಿಸುವುದು, ದೇವಾಲಯಗಳ ನಿರ್ಮಾಣದಲ್ಲಿ ಆಸ್ಥೆ ವಹಿಸುವುದು, ಪುಣ್ಯಕಾರ್ಯಗಳ ವ್ಯವಸ್ಥೆ ಇತ್ಯಾದಿ, ಒಂದಲ್ಲೊಂದು ಇಲ್ಲದ ದಿನವೇ ಇಲ್ಲ. ಪ್ರಾಚೀನ-ಅರ್ವಾಚೀನ ಶಿಕ್ಷಣಗಳೆರಡನ್ನೂ ಮೇಳೈಸಿಕೊಂಡಿರುವ ಪೂಜ್ಯರು, ಪ್ರಸ್ತುತ ಅಗತ್ಯವನ್ನು ಅರಿತು ಹಿಂದಿನ ಮಹತ್ವಪೂರ್ಣ ತತ್ವಗಳೊಂದಿಗೆ ಬೆರೆಸಿ ನೀಡುವ ಆಶೀರ್ವಚನ ಅಪೂರ್ವ; ಅಪರೂಪ. ಅವರು ಪ್ರಾಚೀನ-ಅರ್ವಾಚೀನಗಳ ನಡುವಣ ಮಹಾಸೇತು.

**ರಾಜ್ಯದಲ್ಲೇ ಪ್ರಥಮ**

ಸಂಸ್ಕೃತ ಬಲ್ಲವನು ಮಾತ್ರ ಭಾರತೀಯ ಸಂಸ್ಕೃತಿಯನ್ನು ಪೂರ್ಣವಾಗಿ ಅರಿಯಬಲ್ಲ. ಇಲ್ಲಿ ಶಿಕ್ಷಣ ಪಡೆದು ಹೊರಬರುವ ಪ್ರತಿಯೊರ್ವ ವಿದ್ಯಾರ್ಥಿಯೂ ಸಂಸ್ಕೃತ ಬಲ್ಲವನು. ಅವನ ಜೀವನವೂ ಸುಸಂಸ್ಕೃತ. ಇದೀಗ ತನ್ನ ರಜತ ಮಹೋತ್ಸವವನ್ನಾಚರಿಸಿದ ಇಲ್ಲಿನ ಸಂಸ್ಕೃತ ಕಾಲೇಜು ರಾಜ್ಯದಲ್ಲೇ ಪ್ರಥಮ. ಇದರ ಪ್ರಾರಂಭ ೧೯೧೭, ಅಂದು ೧೬ ಮಂದಿ ಇಂದು ೩೮೦೦ ಮಂದಿ ವಿದ್ಯಾರ್ಥಿಗಳು. ಅಂದಿನ ವೇದಸಂಸ್ಕೃತಗಳ ಪಾಠ ಶಾಲೆಯು ಇಂದು ಆರು ವಿವಿಧ ಶಾಖೆಗಳಲ್ಲಿ ಪದವಿಯೋತ್ತರ ಮಟ್ಟದವರೆಗೆ ಶಿಕ್ಷಣ ನೀಡುವ ಮಹಾ ವಿದ್ಯಾಲಯವಾಗಿದೆ. ವರ್ಷಂಪ್ರತಿ ಐದಾರು ಮಂದಿ ವಿದ್ವಾಂಸರನ್ನು ಕೊಡುಗೆಯಾಗಿ ನೀಡುತ್ತಿದೆ. ಹಿಂದೊಮ್ಮೆ ಸಂಸ್ಕೃತಾಧ್ಯಯನ ಎಲ್ಲ ಜನಾಂಗಕ್ಕೂ ಲಭ್ಯವಿರಲಿಲ್ಲ. ಎಲ್ಲರಿಗೂ ಅವಕಾಶ ಕಲ್ಪಿಸಿಕೊಟ್ಟ ಕೀರ್ತಿ ಪರಮ ಪೂಜ್ಯರಿಗೆ ಸಲ್ಲುತ್ತದೆ. ಪೂಜ್ಯರು ಬೇರೆ ಸರ್ಕಾರಿ ಕಾಲೇಜುಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರು ಸಂಸ್ಕೃತವನ್ನು ಅಭ್ಯಾಸ ಮಾಡುವ ಅವಕಾಶ ಕಲ್ಪಿಸಲು ಶ್ರಮಿಸಿದರು. ಅನೇಕ ಮಂದಿ ಮುಸ್ಲಿಂ





ವಿದ್ಯಾರ್ಥಿಗಳೂ ಸಹ ಸಂಸ್ಕೃತಾಭ್ಯಾಸ ಮಾಡಿ ಉತ್ತಮ ದರ್ಜೆಯಲ್ಲಿ ಉತ್ತೀರ್ಣರಾಗುತ್ತಿರುವ ದಾಖಲೆಗಳಿವೆ.

**ತಾಂತ್ರಿಕ ಶಿಕ್ಷಣ**

ನಮ್ಮ ಧರ್ಮ-ಸಂಸ್ಕೃತಿಗಳು ದುಡಿಮೆಗೆ ಪ್ರಾಧಾನ್ಯತೆ ನೀಡಿವೆ. ತೇಜೋವಂತ ಜೀವನದ ಪಕ್ಷಪಾತಿಗಳು ನಮ್ಮ ಶಾಸ್ತ್ರ ಗ್ರಂಥಗಳು ರಾಷ್ಟ್ರದ ಮುನ್ನಡೆಗಾಗಿ ಪ್ರಜೆಗಳು ಕಷ್ಟಪಟ್ಟು ದುಡಿದು ಉತ್ಪನ್ನವನ್ನು ಹೆಚ್ಚಿಸಬೇಕಾದ್ದು ಅನಿವಾರ್ಯ. ವೈಜ್ಞಾನಿಕ ಆವಿಷ್ಕಾರಗಳ ಸಹಾಯದಿಂದ ಹೆಚ್ಚು ವೇಗದಿಂದ ಪ್ರಗತಿಯನ್ನು ಸಾಧಿಸುತ್ತಿರುವ ಇತರ ದೇಶಗಳೊಂದಿಗೆ ಸ್ಪರ್ಧಿಸಬೇಕಾದ್ದು ಅನಿವಾರ್ಯ. ನಮಗೂ ತಾಂತ್ರಿಕ ಜ್ಞಾನ ಅವಶ್ಯಕ. ಇದು ಪೂಜ್ಯರ ವಿಚಾರಧಾರೆ. ಅಂತೆಯೇ ಅವರಿಂದ ಆರಂಭವಾದ ತಾಂತ್ರಿಕ ಸಂಸ್ಥೆ-ಇಂಜಿನಿಯರಿಂಗ್ ಕಾಲೇಜು ರಾಷ್ಟ್ರದ ಪ್ರತಿಷ್ಠಿತ ಕಾಲೇಜುಗಳಲ್ಲಿ ಒಂದಾಗಿರುವುದು ಈ ಸಂಸ್ಥೆಯ ಹೆಗ್ಗಳಿಕೆ. ಹಿಮಗಿರಿಯಿಂದ ಕನ್ಯಾಕುಮಾರಿಯವರೆಗೆ ಎಲ್ಲ ಸ್ಥಳಗಳ ವಿದ್ಯಾರ್ಥಿಗಳೂ, ವಿದೇಶಿ ವಿದ್ಯಾರ್ಥಿಗಳೂ ಶಿಕ್ಷಣ ಪಡೆಯುತ್ತಿದ್ದಾರೆ. ಹಲವಾರು ಶಾಖೆಗಳಲ್ಲಿ ಪೂರ್ಣಮಟ್ಟದ ಶಿಕ್ಷಣ ನೀಡುತ್ತಿರುವ ಕಾಲೇಜು ತನ್ನದೇ ಆದ ಸುಸಜ್ಜಿತ ಬೃಹತ್ ಕಟ್ಟಡಗಳು, ವಿಶಾಲವಾದ ಮೈದಾನವನ್ನು ಹೊಂದಿದೆ. ತನ್ನ ಸುತ್ತಲ ಆವರಣವನ್ನು ಆವರಿಸಿಕೊಳ್ಳುವ, ಹೆಚ್ಚು ಹೆಚ್ಚು ಶಾಖೆಗಳನ್ನು ಬೆಳೆಸುವ ದಿಶೆಯಲ್ಲಿ ಕಾರ್ಯೋನ್ಮುಖವಾಗಿದೆ.

ಜೊತೆಗೆ ವಿಜ್ಞಾನ, ಕಲೆ, ವಾಣಿಜ್ಯ ಕಾಲೇಜುಗಳು. ಸುಮಾರು ಎರಡು ಸಹಸ್ರ ವಿದ್ಯಾರ್ಥಿಗಳು. ಯೋಗ್ಯ ಮಾರ್ಗದರ್ಶನದಲ್ಲಿ ಉತ್ತಮ ಶಿಕ್ಷಣ, ಅಗತ್ಯವಾದ ಶಿಸ್ತು ಈ ಕಾಲೇಜುಗಳ ವೈಶಿಷ್ಟ್ಯ. ಅನಿವಾರ್ಯ ಕಾರಣಗಳಿಂದ ಶಿಕ್ಷಣವನ್ನು ಮುಂದುವರಿಸಲಾಗದವರ ಅನುಕೂಲಕ್ಕಾಗಿ ತುಮಕೂರಿನಲ್ಲಿ ಸಂಜೆ ಕಾಲೇಜನ್ನು ನಡೆಸಲಾಗುತ್ತಿದೆ.

ಪ್ರತಿದಿನ ನಡೆಯುವ ಸಾಮೂಹಿಕ ಪ್ರಾರ್ಥನೆ
- ಒಂದು ನೋಟ

**ವೃತ್ತಿಪರ ಶಿಕ್ಷಣ**

ಶಿಕ್ಷಣವು ಉದ್ಯಮಗಳನ್ನು ಅವಲಂಬಿಸಿ ರೂಪುಗೊಳ್ಳಬೇಕು. ಇದು ಎಲ್ಲೆಡೆಯೂ ಕೇಳಿ ಬರುತ್ತಿರುವ ಕೂಗು. ಸಿದ್ಧಗಂಗಾ ಶಿಕ್ಷಣ ಸಂಸ್ಥೆಯ ಆಶ್ರಯದಲ್ಲಿ ಒಂದು ಬಿ.ಇಡಿ ಕಾಲೇಜು, ಎರಡು ಉಪಾಧ್ಯಾಯ ಶಿಕ್ಷಣ ಸಂಸ್ಥೆಗಳು, ಎರಡು ತಾಂತ್ರಿಕ ಕೈಗಾರಿಕಾ ತರಬೇತಿ ಸಂಸ್ಥೆಗಳು, ಕನ್ನಡ ಪಂಡಿತ್ ಶಿಕ್ಷಣ ಕಾಲೇಜು ಇತ್ಯಾದಿ ಸಂಸ್ಥೆಗಳೂ ಸಹ ನಡೆಯುತ್ತಿವೆ.

**ಗ್ರಾಮಾಂತರದಲ್ಲಿ**

ಗ್ರಾಮೀಣರ ಸರ್ವಾಂಗೀಣ ಅಭಿವೃದ್ಧಿಯ ಬಗ್ಗೆ ಅಪಾರ ಕಳಕಳಿಯನ್ನು ಹೊಂದಿರುವ ಪರಮಪೂಜ್ಯರು ಗ್ರಾಮೀಣ ಪ್ರದೇಶಗಳ ಮಕ್ಕಳಿಗೆ ಅದರಲ್ಲೂ ವಿಶೇಷವಾಗಿ ಹಿಂದುಳಿದ ಬಡ ಮಕ್ಕಳಿಗೆ ಶಿಕ್ಷಣ ನೀಡುವ ಉದ್ದೇಶದಿಂದ ೪೮ ಪ್ರೌಢಶಾಲೆಗಳನ್ನು ಪ್ರಾರಂಭಿಸಿ ತನ್ಮೂಲಕ ಅವರ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟಿದ್ದಾರೆ. ಬಹುತೇಕ ಪ್ರೌಢಶಾಲೆಗಳಲ್ಲಿ ಸಂಸ್ಕೃತ ಶಿಕ್ಷಣಕ್ಕೂ ಅವಕಾಶ ಕಲ್ಪಿಸಿಕೊಡಲಾಗಿದೆ.

**ಗ್ರಾಮೀಣ ಬಂಧುಗಳಿಗಾಗಿ**

ಗ್ರಾಮೀಣ ರೈತ ಸಮುದಾಯಕ್ಕೆ ಕೃಷಿ ಕ್ಷೇತ್ರದಲ್ಲಾಗುವ ವೈಜ್ಞಾನಿಕ ಪ್ರಗತಿಯ ಬಗ್ಗೆ ಅರಿವು ಮೂಡಿಸುವ ಉದ್ದೇಶದಿಂದ ಪ್ರತಿವರ್ಷ ಶಿವರಾತ್ರಿ ಸಂದರ್ಭದಲ್ಲಿ ನಡೆಯುವ ಶ್ರೀ ಸಿದ್ಧಲಿಂಗೇಶ್ವರ ಜಾತ್ರೆಯ ಸಮಯದಲ್ಲಿ ಕೃಷಿ ಮತ್ತು ಕೈಗಾರಿಕಾ ವಸ್ತು ಪ್ರದರ್ಶನವನ್ನು ಏರ್ಪಡಿಸುತ್ತಿದ್ದು ಇದು ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಗ್ರಾಮೀಣರ ಮೇಲೆ ಪ್ರಭಾವ ಬೀರುತ್ತಿದೆ. ಜಾತ್ರಾ ಸಂದರ್ಭದಲ್ಲಿ ವಸ್ತು ಪ್ರದರ್ಶನದ ಆವರಣದಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಿ ಜನರಿಗೆ ಮನರಂಜನೆ ದೊರೆಯುವಂತೆ ಮಾಡಲಾಗುತ್ತಿದೆ. ಅಲ್ಲದೆ ಸ್ಥಳೀಯ ಪ್ರತಿಭೆಗಳಿಗೆ ಅವಕಾಶ ಕಲ್ಪಿಸಿಕೊಡುತ್ತಿರುವುದು ವಸ್ತು ಪ್ರದರ್ಶನದ ವೈಶಿಷ್ಟ್ಯ.

ಶ್ರೀಶ್ರೀಗಳ ಆಶೀರ್ವಾದದಿಂದ "ಸಿದ್ಧಗಂಗಾ" ತ್ರೈಮಾಸಿಕವನ್ನು ಪ್ರಾರಂಭಿಸಿತು, ನಂತರ ಅದು ಮಾಸಿಕವಾಗಿ ಮಾರ್ಪಾಟು ಹೊಂದಿತು. ಈ ಪತ್ರಿಕೆಯಲ್ಲಿ ಶಿಕ್ಷಣ, ಸಾಹಿತ್ಯ, ಕಲೆ, ಸಂಸ್ಕೃತಿ, ಧರ್ಮ ಇವೇ ಮೊದಲಾದ ವಿಷಯಗಳಿಗೆ ಸಂಬಂಧಿಸಿದಂತೆ ನಾಡಿನ ಹಿರಿಯ ವಿದ್ವಾಂಸರು, ಲೇಖಕರು ಬರೆದ ಲೇಖನಗಳನ್ನು ಪ್ರಕಟಿಸುತ್ತಾ ಬಂದಿದೆ. ಅಭಿಮಾನಿಗಳು ಹಾಗೂ ಓದುಗರ ಸಲಹೆಯಂತೆ ಪತ್ರಿಕೆಯ ಗುಣಮಟ್ಟವನ್ನು ಹೆಚ್ಚಿಸಲು ಇದೇ ಜನವರಿ ೧೯೯೮ರಿಂದ ಪತ್ರಿಕೆಯು ಹೊಸ ವಿನ್ಯಾಸ, ಆಕರ್ಷಕ ಮುಖಪುಟದಿಂದ ಆಫ್‌ಸೆಟ್ ಮುದ್ರಣಾಲಯದಲ್ಲಿ ಮುದ್ರಣವಾಗುತ್ತಿದ್ದು ಓದುಗರ ಮೆಚ್ಚುಗೆಯನ್ನು ಗಳಿಸುವಲ್ಲಿ ಯಶಸ್ವಿಯಾಗಿದೆ. ಅಲ್ಲದೆ ಶ್ರೀಕ್ಷೇತ್ರದ ವತಿಯಿಂದ ಹಲವಾರು ಧಾರ್ಮಿಕ ಗ್ರಂಥಗಳನ್ನು ಪ್ರಕಟಿಸುವುದರ ಮೂಲಕ ಸಾಹಿತ್ಯ ಪ್ರಸಾರ ಮಾಡಲಾಗುತ್ತದೆ.

ರಾಜ್ಯ ಮಟ್ಟದ ವಸ್ತುಪ್ರದರ್ಶನ ಕೃಷಿ ಮತ್ತು ಕೈಗಾರಿಕಾ ವಿಭಾಗಗಳಲ್ಲಿ. ಎಲ್ಲಾ ಇಲಾಖೆಗಳು, ಖಾಸಗಿ ಉದ್ಯಮಗಳು, ಉತ್ಪನ್ನಗಾರರು, ಮಾರಾಟಗಾರರು ಮಳಿಗೆಗಳನ್ನು ತೆರೆಯುತ್ತಾರೆ. ಹಳ್ಳಿಯ ರೈತ ವಸ್ತು ಪ್ರದರ್ಶನ ನೋಡಲು ನಗರಗಳಿಗೆ ಹೋಗಲಾರ. ಆದರೆ ಪ್ರದರ್ಶನಗಳೇರ್ಪಾಡಾಗುವುದು ದೊಡ್ಡ ನಗರಗಳಲ್ಲಿ. ರಾಷ್ಟ್ರ ಸಾಧಿಸಿರುವ ಪ್ರಗತಿ ಅವನಿಗೆ ಕಾಣಸಿಗದು. ಆ ಕಾರಣ ಇಲ್ಲಿ ಪ್ರದರ್ಶನ. ಸುಮಾರು ನೂರಕ್ಕೂ ಹೆಚ್ಚು ಮಳಿಗೆಗಳು. ವರ್ಷಂಪ್ರತಿ ಲಕ್ಷಕ್ಕೂ ಜಾಸ್ತಿ ಜನರ ಭೇಟಿ. ದಿನೇ ದಿನೇ ಅಭಿವೃದ್ಧಿ ಹೊಂದುತ್ತಿರುವುದು ಸಂತಸದ ವಿಷಯ.

ದನಗಳ ಜಾತ್ರೆ; ಮೂವತ್ತು-ನಾಲ್ವತ್ತು ಸಾವಿರ ರಾಸುಗಳು. ಹಲವರು ಕೊಳ್ಳುವರು-ಹಲವರು ಮಾರುವರು. ಮಾರಿದವರು ಮತ್ತೆ ಕೊಳ್ಳುವವರಿಗೆ ಇದೊಂದು ವಿಶೇಷ ಅವಕಾಶ; ಉತ್ತಮ ರಾಸುಗಳಿಗೆ ಬಹುಮಾನ ವಿನಿಯೋಗ. ಒಂದು ಅದ್ಭುತ ವ್ಯವಸ್ಥೆ: ಜಾತ್ರೆಗೆ ಬಂದ ಪ್ರತಿ ರಾಸುವಿಗೆ ಜೀವವಿಮೆ ಏರ್ಪಾಡು ಮಾಡಲಾಗುವುದು. ರಾಸುವಿಗೆ ಅಪಾಯ ಸಂಭವಿಸಿದರೆ ಅಕಾಲ ಮೃತ್ಯು ಉಂಟಾದರೆ, ಅರ್ಧರ ಪೂರ್ಣ ಬೆಲೆ ಕೊಡಲಾಗುವುದು.

**ಹಳೆಯ ವಿದ್ಯಾರ್ಥಿಗಳ ಸಂಘ**

ಕ್ಷೇತ್ರದಲ್ಲಿ ಶಿಕ್ಷಣ ಪಡೆದ ವಿದ್ಯಾರ್ಥಿಗಳು ಇಂದು ವಿವಿಧ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಅವರದು ನಿಷ್ಕಾಮ ಸೇವೆ. ಆದರ್ಶ ಜೀವನ. ಅನೇಕ ಮಂದಿ ಉತ್ತಮ ಸ್ಥಾನಗಳಲ್ಲಿದ್ದಾರೆ. ಇದು ಸಂಸ್ಥೆಗೇ ಹೆಮ್ಮೆ. ಹಳೆಯ ವಿದ್ಯಾರ್ಥಿಗಳೆಲ್ಲರೂ ಒಂದೆಡೆ ಸೇರಿ ಶ್ರೀಕ್ಷೇತ್ರಕ್ಕೆ ಸೇವೆ ಸಲ್ಲಿಸುವ ದೃಷ್ಟಿಯಿಂದ ಹಳೆಯ ವಿದ್ಯಾರ್ಥಿಗಳ ಸಂಘವನ್ನು ಸ್ಥಾಪಿಸಿಕೊಂಡು ತನ್ಮೂಲಕ ಹಲವಾರು ಪ್ರಗತಿಪರ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಅನುಷ್ಠಾನಗೊಳಿಸುತ್ತಿದೆ. ಶ್ರೀಕ್ಷೇತ್ರದ ಎಲ್ಲ ಕೆಲಸ ಕಾರ್ಯಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ನಿಸ್ವಾರ್ಥ ಸೇವೆ ಸಲ್ಲಿಸುತ್ತಿದ್ದಾರೆ.

**ಪ್ರಕಟಣೆಗಳು**

೩೪ ವರ್ಷಗಳ ಹಿಂದೆ ಹಳೆಯ ವಿದ್ಯಾರ್ಥಿಗಳ ಸಂಘವು

**ಬೃಹತ್ ಗ್ರಂಥ ಭಂಡಾರ**

ಶ್ರೀಮಠದಲ್ಲಿ ಒಂದು ಸುಸಜ್ಜಿತ ಗ್ರಂಥ ಭಂಡಾರವಿದ್ದು ಅದರಲ್ಲಿ ಹತ್ತು ಸಹಸ್ರಕ್ಕೂ ಹೆಚ್ಚು ವಿವಿಧ ವಿಷಯಗಳಿಗೆ ಸಂಬಂಧಿಸಿದ ಗ್ರಂಥಗಳಿದ್ದು, ನೂರಾರು ವರ್ಷಗಳ ಪ್ರಾಚೀನ ಪ್ರಕಟಣೆಗಳೂ ಲಭ್ಯವಿರುವುದು ಈ ಗ್ರಂಥ ಭಂಡಾರದ ವೈಶಿಷ್ಟ್ಯ. ಇತ್ತೀಚಿನ ಪ್ರಕಟಣೆಗಳೂ ಲಭ್ಯವಿದ್ದು, ಇದನ್ನು ಉತ್ತಮ ಸಂಶೋಧನಾಲಯ ಗ್ರಂಥ ಭಂಡಾರವನ್ನಾಗಿ ಪರಿವರ್ತಿಸುವ ಪ್ರಯತ್ನಗಳು ನಡೆದಿವೆ. ದಿನದಿಂದ ದಿನಕ್ಕೆ ಗ್ರಂಥಾಲಯದ ಉಪಯೋಗವನ್ನು ಪಡೆಯುವವರ ಸಂಖ್ಯೆ ಹೆಚ್ಚುತ್ತಿದ್ದು ಅವರಿಗೆ ಎಲ್ಲಾ ರೀತಿಯ ಸೌಲಭ್ಯವನ್ನು ಒದಗಿಸಲಾಗಿದೆ. ಅನೇಕ ಮಹನೀಯರು ಗ್ರಂಥಗಳನ್ನು ದಾನ ಮಾಡುವುದರ ಮೂಲಕ ನೆರವಾಗುತ್ತಿದ್ದಾರೆ. ಅವರಲ್ಲಿ ದಿವಂಗತ ಟಿ. ತಿಪ್ಪೇರುದ್ರಯ್ಯನವರು, ಶ್ರೀ ಕೆ. ವೆಂಕಟರಾಮಯ್ಯ, ಶ್ರೀ ಕೆ.ಎಂ. ರೇವಣಸಿದ್ದಯ್ಯ ಹಾಗೂ ಪಂಡಿತ ಚನ್ನಪ್ಪ ಎರೆಸೀಮೆ ಮೊದಲಾದವರು ತಮ್ಮಲ್ಲಿದ್ದ ಅಮೂಲ್ಯ ಹಾಗೂ ಅಪರೂಪದ ಗ್ರಂಥಗಳನ್ನು ಕೊಡುಗೆಯಾಗಿ ನೀಡಿ ಉಪಕರಿಸಿದ್ದಾರೆ.





# ನಿದ್ದೆ

- ಟಿ.ಆರ್. ಮಹಾದೇವಯ್ಯ,
ಸದಸ್ಯರು, ಭಾಷಾ ಆಯೋಗ,
ನಂ. 376, ಮಾರಮ್ಮ ಗುಡಿ ಬೀದಿ,
8ನೆಯ ಅಡ್ಡರಸ್ತೆ, ಶ್ರೀ ಸಿದ್ಧಗಂಗಾ ಸಾಮೂಹಿಕ
ಭವನದ ಬಳಿ, ಮಂಜುನಾಥನಗರ,
ಬೆಂಗಳೂರು-560 010

*ಆಧುನಿಕ ಜೀವನದಲ್ಲಿ ನಿರಾಶ-ನಿಶ್ಚಿಂತ ನಿದ್ದೆ ಎಂಬುದು ಅಪೂರ್ವವಾಗಿದೆ. ಇದಕ್ಕೆ ಬದಲಾಗುತ್ತಿರುವ ಸಾಮಾಜಿಕ, ರಾಜಕೀಯ ಪರಿಸ್ಥಿತಿಗಳೇ ಕಾರಣ. ಹಿಂದೆ ಒಂದು ಕಾಲದಲ್ಲಿ ಯಾವುದೇ ಸಾಮಾನನ್ನು ಎಲ್ಲಿ ಅಂದರೆ ಅಲ್ಲಿ ಇಟ್ಟು ನಿದ್ದೆ ಮಾಡುತ್ತಿದ್ದರು. ದಿಗಿಲಿಗೆ ಅವಕಾಶವೇ ಇರಲಿಲ್ಲ. ಅದು ತೃಪ್ತಿಯ ಕಾಲ. ಪ್ರಾಮಾಣಿಕತೆ ಬದುಕಿನ ಹಾಸು-ಹೊಕ್ಕು ಆಗಿದ್ದ ಕಾಲ. ಈಗ ಸಾಮಾನನ್ನೆಲ್ಲಾ ಒಳಗೆ ಇಟ್ಟು ನಾಲ್ಕೈದು ಬೀಗ ಹಾಕಿ ಮೇಲೆ ಕಾವಲುಗಾರರನ್ನು ನೇಮಿಸಿದರೂ ಯಾವಾಗ ಏನೋ ಎಂಬ ದಿಗಿಲು!*

ಜಾಗೃತ ಸ್ವಪ್ನ ಸುಷುಪ್ತಿ - ಇವು ಮೂರು ಮಾನವನ ಮನಸ್ಸಿನ ಅವಸ್ಥೆಗಳು; ಚಿತ್ತ ವೃತ್ತಿಗಳು. ಮೊದಲನೆಯದು ಪೂರ್ಣ ಎಚ್ಚರವಾಗಿರುವ ಸ್ಥಿತಿ. ಕೊನೆಯ ಎರಡು ನಿದ್ದೆಯಲ್ಲಿರುವ ಜೀವಿಯ ಎರಡು ಅವಸ್ಥೆಗಳನ್ನು ಹೇಳುತ್ತವೆ. ಸ್ವಪ್ನಾವಸ್ಥೆ ಅರೆ ಎಚ್ಚರ, ಅರೆ ನಿದ್ದೆಯ ಸ್ಥಿತಿ. ಕೊನೆಯ ಸುಷುಪ್ತಿ ಇದೆಯಲ್ಲಾ ಅದು ಯಾವ ವಿಧವಾದ ಜ್ಞಾನವೂ ಇಲ್ಲದಿರುವ ಸ್ಥಿತಿ. ಸಂಪೂರ್ಣ ಮೈಮರೆವು. ಅದು ಒಂದು ರೀತಿಯಲ್ಲಿ ಉಸಿರಾಡುತ್ತಿರುವ ಶವದ ಸ್ಥಿತಿ! ಸಾವನ್ನು ದೀರ್ಘ ನಿದ್ದೆ ಎಂದು ಕರೆದಿರುವುದು ಇದಕ್ಕಾಗಿಯೋ ಏನೋ!

ನಿದ್ದೆ ಜೀವಿಗೆ ಅತ್ಯಾವಶ್ಯಕ. ದೈಹಿಕ ಹಾಗೂ ಮಾನಸಿಕ ಆರೋಗ್ಯಕ್ಕೆ ಅದು ಬೇಕೇಬೇಕು. ದಿವಸವನ್ನು ಹಗಲು-ರಾತ್ರಿಗಳೆಂದು ಭಾಗ ಮಾಡಿ, ಹಗಲನ್ನು ದುಡಿಮೆಗೂ, ರಾತ್ರಿಯನ್ನು ವಿಶ್ರಾಂತಿಗೂ ನಿಯೋಜಿಸಿದ ಆ ಸೃಷ್ಟಿಕರ್ತನನ್ನು ಎಷ್ಟು ಕೊಂಡಾಡಿದರೂ ಕಡಿಮೆಯೇ. ರಾತ್ರಿಯ ನಿದ್ದೆಯ ಮೂಲಕ ದೇಹಕ್ಕೆ ವಿಶ್ರಾಂತಿ, ಮನಸ್ಸಿಗೆ ಶಾಂತಿ ನೀಡದಿದ್ದರೆ ಮಾನವಲೋಕವೆಲ್ಲಾ ಹುಚ್ಚರ ಬೀಡಾಗುತ್ತಿತ್ತೇನೋ ಎನ್ನಿಸುತ್ತದೆ.

ಕಷ್ಟಪಟ್ಟು ದುಡಿಯುವ ಕಾಯಕದ ಕಲಿಗೆ ರಾತ್ರಿ ಮಲಗಿದಾಗ ಎಂಥ ಸುಖ ನಿದ್ದೆ! ಅವನಿಗೆ ಹಾಸಿಗೆ ಬೇಡ, ದಿಂಬು ಬೇಡ. ಮಲಗಿದ ತಕ್ಷಣ ಆವರಿಸುತ್ತದೆ ನಿದ್ದೆ - ದೇಹಶ್ರಮವನ್ನೆಲ್ಲಾ ಪರಿಹರಿಸುವ ದಿವ್ಯ ಸಂಜೀವಿನಿಯಾಗಿ. ಮೈಕೈ ನೋಯಿಸಿಕೊಳ್ಳದ ಮೈಗಳ್ಳರಿಗೆ, ಸೋಮಾರಿಗಳಿಗೆ ಹಂಸತೂಲಿಕಾ ತಲ್ಪದಲ್ಲಿ ಮಲಗಿಸಿದರೂ ನಿದ್ದೆ ದೂರ, ದೂರ. ಬರೀ ಹೊರಳಾಟ, ನರಳಾಟ. ಇಲ್ಲವೇ ಸ್ವಪ್ನಗಳ ಕಾಟ! ಅದರಂತೆ ನಿಷ್ಕಪಟರಿಗೆ, ಪ್ರಾಮಾಣಿಕರಿಗೆ, ನಿರಾಳ ಮನದವರಿಗೆ ಮಲಗುತ್ತಿದ್ದಂತೆಯೇ ನಿಶ್ಚಿಂತ ಸುಖನಿದ್ದೆ. ಅದೇ ಮನಸ್ಸು ಕ್ಷೋಭೆಗೊಂಡ ಕ್ಷುದ್ರರಿಗೆ ಎಲ್ಲಿಯ ನಿದ್ದೆ?

ನಿದ್ದೆಗೆ ನಾವು ವಶವೋ? ಅದು ನಮ್ಮ ವಶವೋ? ನಾವು ವಿಚಾರ ಮಾಡಬೇಕು. ಸಾಮಾನ್ಯವಾಗಿ ಎಲ್ಲರೂ ನಿದ್ರಾವಶವೇ. ಅದು ಬಂದು ಆವರಿಸಿದಲ್ಲಿ ಕಣ್ಣುಮುಚ್ಚಿ, ಅದು ಬಿಟ್ಟಾಗ ಮಂಪರು ಆರಿ ಹೊರ ಜಗತ್ತಿಗೆ ಮರಳುತ್ತೇವೆ. ಆದರೆ ಕೆಲವು ಮಹಾತ್ಮರ ವಿಚಾರದಲ್ಲಿ ನಿದ್ದೆ ಸದಾ ದೂರದಲ್ಲಿ ಕೈಕಟ್ಟಿ ವಿಧೇಯವಾಗಿ ನಿಂತಿರುತ್ತದೆ. ಅವರು ಅಪ್ಪಣೆ ಕೊಟ್ಟರೆ ಬಂದು, ಅವರು ಸಾಕೆಂದಾಗ ಇದ್ದಕ್ಕಿದ್ದಂತೆ ಹೊರಟು ಹೋಗುತ್ತದೆ. ಗಾಂಧೀಜಿಯಂಥ ಜಿತಮನಸ್ಕರಿಗೆ, ಅದು ಹೇಳಿದಂತೆ ಕೇಳುತ್ತದೆ. ಸಭೆಗಳಿಗೆ ಬಂದ ಗಾಂಧೀಜಿ, ಕಾರ್ಯಕ್ರಮ ಆರಂಭವಾಗಲು ಇನ್ನೂ ಐದಾರು ನಿಮಿಷವಿದ್ದರೆ, 'ಬಂದೆ, ಐದು ನಿಮಿಷ ನಿದ್ದೆ ಮಾಡುವೆ' ಎಂದುಕೊಂಡ ತಕ್ಷಣ ವಿದ್ಯುತ್ ಗುಂಡಿಯನ್ನೊತ್ತಿದರೆ ಚಾಲನೆಯೊದಗುವಂತೆ ನಿದ್ದೆ ಬರುತ್ತಿತ್ತು. ಅದೂ ಗಾಢನಿದ್ದೆ. ಐದೆಂದರೆ ಐದು ನಿಮಿಷ ಮಾತ್ರ. ತಕ್ಷಣ ಎಚ್ಚರ. ಮತ್ತೆ ಹೊತ್ತಿಗೆ ಸರಿಯಾಗಿ ಕಾರ್ಯಕ್ರಮವನ್ನು ಆರಂಭಿಸುತ್ತಿದ್ದರಂತೆ!

ಕುಂಭಕರ್ಣನ ನಿದ್ದೆ ಪುರಾಣ ಪ್ರಸಿದ್ಧ. ಎಷ್ಟು ಕೂಗಿದರೂ ಎಚ್ಚರಾಗದವನನ್ನು, ಬಹಳ ಹೊತ್ತು ಮಲಗುವವನನ್ನು ಈಗಲೂ

'ಕುಂಭಕರ್ಣ'ನೆಂದು ಕರೆಯುವುದು ರೂಢಿ. ವಿಶ್ರಾಂತಿಗಾಗಿ ರಾತ್ರಿ ನಿದ್ದೆ ಮಾಡುವುದು ಸರಿ. ಆದರೆ ಸೋಮಾರಿಗಳಿಗೆ, ಕೆಲಸಗಳ್ಳರಿಗೆ ಹಗಲೂ ನಿದ್ದೆ ಬೇಕು. ತೂಕಡಿಸುವುದೇ ಅವರ ಸ್ವಭಾವ. ಹೀಗಾಗಿ ನಿದ್ದೆ ಅನಿಷ್ಟದ ಸಂಕೇತವೂ ಆಗುತ್ತದೆ. ಅದು ಜಡತೆ, ಅಜ್ಞಾನ, ಅಂಧಕಾರ, ಕ್ಲೈಬ್ಯಗಳ ದ್ಯೋತಕವೆನಿಸುತ್ತದೆ. ಬುದ್ಧನ ಸಿದ್ಧಿಯನ್ನು ಶಬ್ದದಲ್ಲಿ ಕಂಡರಿಸಿದ ಬೇಂದ್ರೆಯವರು ಆ ಕವನವನ್ನು ಆರಂಭಿಸಿರುವುದು ಈ ಸಾಲಿನಿಂದ : **'ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ'**. ಏಕೆಂದರೆ ಬುದ್ಧ ಮನೆ ಬಿಟ್ಟು ಹೊರಟಿದ್ದು ರಾತ್ರಿ ಅರ್ಧಹೊತ್ತಿನಲ್ಲಿ. ಜಗತ್ತೆಲ್ಲ ಅಂಧಕಾರದಲ್ಲಿ ಮುಳುಗಿರುವಾಗ ಬೆಳಕನ್ನರಸುತ್ತಾ ಬುದ್ಧ ಹೊರಟಿದ್ದ!

ಆಧುನಿಕ ಜೀವನದಲ್ಲಿ ನಿರಾಶ-ನಿಶ್ಚಿಂತ ನಿದ್ದೆ ಎಂಬುದು ಅಪೂರ್ವವಾಗಿದೆ. ಇದಕ್ಕೆ ಬದಲಾಗುತ್ತಿರುವ ಸಾಮಾಜಿಕ, ರಾಜಕೀಯ ಪರಿಸ್ಥಿತಿಗಳೇ ಕಾರಣ. ಹಿಂದೆ ಒಂದು ಕಾಲದಲ್ಲಿ ಯಾವುದೇ ಸಾಮಾನನ್ನು ಎಲ್ಲಿ ಅಂದರೆ ಅಲ್ಲಿ ಇಟ್ಟು ನಿದ್ದೆ ಮಾಡುತ್ತಿದ್ದರು. ದಿಗಿಲಿಗೆ ಅವಕಾಶವೇ ಇರಲಿಲ್ಲ. ಅದು ತೃಪ್ತಿಯ ಕಾಲ. ಪ್ರಾಮಾಣಿಕತೆ ಬದುಕಿನ ಹಾಸು-ಹೊಕ್ಕು ಆಗಿದ್ದ ಕಾಲ. ಈಗ ಸಾಮಾನನ್ನೆಲ್ಲಾ ಒಳಗೆ ಇಟ್ಟು ನಾಲ್ಕೈದು ಬೀಗ ಹಾಕಿ ಮೇಲೆ ಕಾವಲುಗಾರರನ್ನು ನೇಮಿಸಿದರೂ ಯಾವಾಗ ಏನೋ ಎಂಬ ದಿಗಿಲು! ಪರಿಸ್ಥಿತಿ ಹೀಗಿರುವಾಗ ಸುಖ ನಿದ್ದೆಗೆಡೆಯೆಲ್ಲಿ? ನಾಗರಿಕ ಜೀವನ ನಮಗೆ ಏನೇನೋ ಸೌಲಭ್ಯಗಳನ್ನು ತಂದಿತು; ಸುಖ-ಭೋಗಗಳನ್ನು ಒದಗಿಸಿತು. ಅಷ್ಟೇ ಮಟ್ಟಿಗೆ ನೆಮ್ಮದಿ ತಂದಿತೆ? ನಿರಾಳವಾಗಿ ನಿದ್ದೆ ಮಾಡುವ ಸನ್ನಿವೇಶ ಉಳಿಸಿತೆ?

ಇನ್ನೊಂದು ವಿಚಾರ! ಸಾಮಾನ್ಯರಿಗೆ ನಿದ್ದೆ ಎಂದರೆ ಮಲಗಿ ಗೊರಕೆ ಹೊಡೆಯುವುದು. ಮಹಾತ್ಮರಿಗೆ, ಸಿದ್ಧಪುರುಷರಿಗೆ, ನಿದ್ದೆ ಎಂದರೆ ಜಡತೆಯ ಸೋಂಕೇ ಇಲ್ಲದ ಧ್ಯಾನ, ಯೋಗನಿದ್ರೆ. ಈ ವಿಚಾರ.

**'ಶರಣ ನಿದ್ರೆಗೈದಡೆ ಜಪಕಾಣಿರಣ್ಣಾ, ಶರಣ ಎದ್ದಿದ್ದರೆ ಶಿವರಾತ್ರಿ ಕಾಣಿರಣ್ಣಾ'** ಎಂಬ ಮಾತಿನಲ್ಲಿ ಸ್ಫುಟಗೊಂಡಿದೆ. ●

**ಎಲ್ಲ ಬಲ್ಲಿದನಯ್ಯ ಕಲ್ಯಾಣ ಬಸವಯ್ಯ**
**ಚೆಲ್ಲಿದನು ತಂದು ಶಿವಬೆಳಕ । ನಾಡೊಳಗೆ**
**ಸೊಲ್ಲೆತ್ತಿ ಜನವು ಹಾಡುವುದು॥**

**ಬಸವಣ್ಣ ನಿನ್ಹೆಸರು ದೆಶೆದೆಶೆಗೆ ಶಿವಮಂತ್ರ**
**ಹೊಸಮತಕೆ ಮಂತ್ರ ನಿತ್ಯದಲಿ । ಒಕ್ಕಲಿಗ**
**ಹೊಸ ಮಂತ್ರ ಬಸವ ಜಪಿಸುವನು॥**

ಶ್ರದ್ಧಾಂಜಲಿ



ಶ್ರೇಷ್ಠ ಭಾಷಾ ವಿಜ್ಞಾನಿ

## ಡಾ. ಆರ್.ಸಿ. ಹಿರೇಮಠ

ಡಾ. ಆರ್.ಸಿ. ಹಿರೇಮಠ ಅವರು ಕನ್ನಡ ನಾಡಿನ ಬಹುಮುಖ ಪ್ರತಿಭೆಯ ಹಿರಿಯ ವಿದ್ವಾಂಸರಲ್ಲಿ ಮಹತ್ವದ ಹೆಸರನ್ನು ಗಳಿಸಿದವರು. ಸಂಶೋಧನೆ, ಭಾಷಾಶಾಸ್ತ್ರ, ಸಂಪಾದನೆ, ಶಾಸನಶಾಸ್ತ್ರ, ಜನಪದ ಸಾಹಿತ್ಯ, ಧಾರ್ಮಿಕ ಸಾಹಿತ್ಯ, ಪುರಾತತ್ವ ಶಾಸ್ತ್ರ, ವಚನ ಸಾಹಿತ್ಯ ಇತ್ಯಾದಿ ವಾಙ್ಮಯ ಕ್ಷೇತ್ರಗಳಿಗೆ ಅವರ ಕೊಡುಗೆ ಸ್ಮರಣೀಯವಾದದ್ದು. ಅವರ ಲೇಖನಿಯಿಂದ ಹೊರಬಂದ ಸಂಶೋಧನಾ ಕೃತಿಗಳು ಅತ್ಯಂತ ಮೌಲಿಕವಾದವು. ಬಸವಣ್ಣ, ಅಲ್ಲಮ, ಅಕ್ಕಮಹಾದೇವಿ, ಮೊದಲಾದವರ ವಚನಗಳನ್ನು ಅಚ್ಚುಕಟ್ಟಾಗಿ ಸಂಪಾದಿಸಿ ಕೊಟ್ಟಿದ್ದಾರೆ. ರಾಜಶೇಖರ ವಿಲಾಸ, ಮೋಹನ ತರಂಗಿಣಿ, ರಾಮಚಂದ್ರ ಚರಿತ ಪುರಾಣ, ಬಸವ ಪುರಾಣ ಮೊದಲಾದ ಕೃತಿಗಳು ಅವರ ಗ್ರಂಥ ಸಂಪಾದನಾ ಕೌಶಲ್ಯಕ್ಕೆ ಉದಾಹರಣೆಗಳಾಗಿವೆ. ಸಾಹಿತ್ಯ ಸಂಸ್ಕೃತಿ, ಕವಿ ಪದ್ಮಣಾಂಕ, ಮಹಾಕವಿ ರಾಘವಾಂಕ ಮೊದಲಾದವು ಅವರ ವಿಮರ್ಶಾ ಕೃತಿಗಳು. ಅರವತ್ತಕ್ಕೂ ಹೆಚ್ಚು ಸಂಪಾದಿತ ಹಾಗೂ ಸಂಶೋಧಿಸಿದ ಕೃತಿಗಳ ಕರ್ತೃವಾದ ಡಾ. ಹಿರೇಮಠರ ಮಾರ್ಗದರ್ಶನದಲ್ಲಿ ಅನೇಕ ಪ್ರತಿಭಾವಂತರು ಡಾಕ್ಟರೇಟ್ ಪಡೆದಿದ್ದಾರೆ. ಕನ್ನಡ ಭಾಷಾ ಚಳುವಳಿಯಲ್ಲಿ ಕ್ರಿಯಾತ್ಮಕವಾಗಿ ಪಾಲುಗೊಂಡಿದ್ದ ಹಿರೇಮಠ ಅವರು ಕನ್ನಡಕ್ಕೆ ಸಂಬಂಧಿಸಿದ ಅನೇಕ ಉನ್ನತ ಸಮಿತಿಗಳಲ್ಲಿದ್ದು ಸೇವೆ ಸಲ್ಲಿಸಿದ್ದಾರೆ. ಅಂತರಾಷ್ಟ್ರೀಯ ದ್ರಾವಿಡ ಭಾಷಾ ಸಂಸ್ಥೆಯ ನಿರ್ದೇಶಕರಾಗಿ ಅಮೂಲ್ಯವಾದ ಕಾಣಿಕೆಯನ್ನು ನೀಡಿದ್ದಾರೆ. ಕರ್ನಾಟಕ ವಿಶ್ವವಿದ್ಯಾನಿಲಯದ ಅನೇಕ ವಿಭಾಗಗಳಿಗೆ ಹೊಸ ಜೀವ ತುಂಬಿದ ಕೀರ್ತಿ ಡಾ. ಹಿರೇಮಠ ಅವರಿಗೆ ಸಲ್ಲುತ್ತದೆ.

೧೯೬೦ರಲ್ಲಿ ಶ್ರೇಷ್ಠ ಸಂಶೋಧಕರೆಂದು ಅವರಿಗೆ ರಾಜ್ಯ ಅಕಾಡೆಮಿಯ ಪ್ರಶಸ್ತಿ ಬಂದಿತು. ೧೯೯೦ರಲ್ಲಿ ಅವರನ್ನು ಹುಬ್ಬಳ್ಳಿಯಲ್ಲಿ ನಡೆದ ಅಖಿಲ ಭಾರತ ೬೦ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಲಾಯಿತು. ಅವರ ಆತ್ಮ ೬ನೇ ನವೆಂಬರ್ ೧೯೯೮ರಂದು ಶಿವನಲ್ಲಿ ಲೀನವಾಯಿತು.

ಅಗಲಿದ ಶ್ರೇಷ್ಠ ವಿದ್ವಾಂಸ ಡಾ. ಆರ್.ಸಿ. ಹಿರೇಮಠ ಅವರ ಆತ್ಮಕ್ಕೆ ದಯಾಮಯನಾದ ಪರಶಿವನು ಚಿರಶಾಂತಿಯನ್ನು ನೀಡಲೆಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಸಂತಾಪ ಸೂಚಿಸಿದ್ದಾರೆ.

ದಿವಂಗತರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನೀಯಲೆಂದು "ಸಿದ್ಧಗಂಗಾ" ಪ್ರಾರ್ಥಿಸುತ್ತದೆ. ●





# ಶರಣರು ಕಟ್ಟಬಯಸಿದ ಸಮಾಜ

-- ಶ್ರೀ ಮಡಿವಾಳ ದೇವರು
ನಾಗನೂರು ರುದ್ರಾಕ್ಷಿಮಠ
ಶಿವಬಸವನಗರ ಬೆಳಗಾವಿ.

ಒಂದು ಸಮಾಜ ಸರ್ವಾಂಗೀಣ ಪ್ರಗತಿ ಪಡೆಯಬೇಕೆಂದರೆ ಅದು ಸಾಮಾಜಿಕ, ಆರ್ಥಿಕ, ರಾಜಕೀಯ ಹಾಗೂ ಧಾರ್ಮಿಕವಾಗಿ ಮುನ್ನಡೆ ಸಾಧಿಸಬೇಕು. ಇಂತಹ ಅಭಿವೃದ್ಧಿ ಕಾರ್ಯದಲ್ಲಿ ಮಹಿಳೆಯರು ಸಹಕರಿಸಿ ನಿರಂತರ ಪ್ರಯತ್ನ ಮಾಡಬೇಕು. ಹನ್ನೆರಡನೇ ಶತಮಾನದಲ್ಲಿ ಶಿವಶರಣರು ಚರ್ಚೆಗೆ ಒಳಗಾಗದ ವಿಷಯವೆ ಉಳಿದಿಲ್ಲ. ಶರಣರು ಆಡಿದ ಪ್ರತಿಯೊಂದು ವಿಷಯವು ಸಮಾಜದ ಕತ್ತಲೆಯನ್ನು ಹೋಗಲಾಡಿಸುವ ಪ್ರಜ್ವಲ ಜ್ಯೋತಿಯಾಗಿದೆ.

ಹನ್ನೆರಡನೇ ಶತಮಾನದಲ್ಲಿ ಒಂದು ಅಭೂತಪೂರ್ವ ಕ್ರಾಂತಿಯಾಯಿತು. ಕರ್ನಾಟಕದಲ್ಲಿ ಕನ್ನಡಿಗರೇ ಆದ ಶಿವಶರಣರಿಂದ ಬಹುಶಃ ಇಂತಹ ಕ್ರಾಂತಿ ಜಗತ್ತಿನ ಇತಿಹಾಸದಲ್ಲಿಯೇ ಬೇರೆ ಎಲ್ಲಿ ಕಂಡು ಬರುವುದಿಲ್ಲ. ಆದೂ ಧಾರ್ಮಿಕ ಕ್ರಾಂತಿಯಾದರೆ, ಬರಬರುತ್ತಾ ಸಾಮಾಜಿಕ, ಆರ್ಥಿಕ, ರಾಜಕೀಯ ಕ್ರಾಂತಿಯಾಗಿ ತನ್ನ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡಿತು.

ಆಗಿನ ಸಮಾಜದ ಪರಿಸ್ಥಿತಿ ಸಂಪೂರ್ಣವಾಗಿ ಹದಗೆಟ್ಟು ಹೋಗಿತ್ತು. ಒಂದು ಹೊಸ ಆದರ್ಶ ಸಮಾಜವನ್ನು ರಚಿಸುವದು ಅವಶ್ಯವಿತ್ತು. ಧರ್ಮದ ಆಧಾರದ ಮೇಲೆ ಒಂದು ಹೊಸ ಸಮಾಜ ಕಟ್ಟಬೇಕೆಂಬ ಬಸವಣ್ಣನವರು ಯೋಚಿಸಿದರು. ವಿಶ್ವಧರ್ಮವನ್ನು ಗುರಿಯನ್ನಾಗಿ ಇಟ್ಟುಕೊಂಡು ವೀರಶೈವ ಧರ್ಮವನ್ನು ಸ್ಥಾಪಿಸಿದರು.

ಅವರು ಅನುಷ್ಠಾನಕ್ಕೆ ತಂದ ತತ್ವಗಳು ಅಂದಿಗೂ ಇಂದಿಗೂ ಎಂದೆಂದಿಗೂ ಅವಿಸ್ಮರಣೀಯ. ಅವು ಯಾವುವೆಂದರೆ ವ್ಯಕ್ತಿ ಸ್ವಾತಂತ್ರ್ಯ, ಸ್ತ್ರೀ ಸ್ವಾತಂತ್ರ್ಯ, ಸಮತಾವಾದ, ಕಾಯಕದಲ್ಲಿ ಸಮಾನತೆ ಹಾಗೂ ಶ್ರದ್ಧೆ ಮೊದಲಾದವುಗಳು ಇಂತಹ ಒಂದು ಉದಾತ್ತ ತತ್ವಗಳನ್ನು ಶರಣ ಶರಣೆಯರು ನಿಷ್ಠೆಯಿಂದ ಆಚರಿಸಿ ತಮ್ಮ ನಡೆ ನುಡಿಗಳ ಮೂಲಕ ಸಮಾಜದ ಸರ್ವಾಂಗೀಣ ಪ್ರಗತಿಗೆ ಕಾರಣಭೂತರಾಗಿದ್ದಾರೆ.

ಆಗಿನ ಸಮಾಜದಲ್ಲಿ ಶರಣರು ಜಾತಿಯತೆಯನ್ನು ಪ್ರತಿಭಟಿಸಿದರು. ಒಂದೇ ನೀರು, ಒಂದೇ ನೆಲ, ಒಂದೆ ಕುಲ ಇದ್ದರೂ ಆ ಜನ ತಾರತಮ್ಯ ಮಾಡುವುದನ್ನು ಶರಣರು ಖಂಡಿಸಿದರು. ಬಸವಣ್ಣನವರು ಇಂತಹ ಹಿಂದುಳಿದವರನ್ನು, ದೀನದಲಿತರನ್ನು ಮುಟ್ಟಿ ಸುಜ್ಞಾನದ ನೀರಿನಿಂದ ತೊಳೆದು, ಸದಾಚಾರ ವಸ್ತ್ರಗಳನ್ನು ಉಡಿಸಿ ಸದ್ಭಕ್ತಿಯೇ ಆಭರಣ ತೊಡಿಸಿ ಎಲ್ಲ ರಂಗಗಳಲ್ಲಿ ಅವರನ್ನು ಸಮಾನರಾಗಿ ನಡೆಸಿಕೊಂಡರು. ೨೦ನೇ ಶತಮಾನದಲ್ಲಿ ಕೂಡ ಅಂತರಜಾತಿ ವಿವಾಹ ಮೂಡಿಸುವಲ್ಲಿ ನಾವು ವಿಫಲವಾಗಿದ್ದೇವೆ. ಆದರೆ ೧೨ ಶತಮಾನದಲ್ಲಿ ಶರಣರು ಈ ಕಾರ್ಯಮಾಡಬೇಕಾದರೆ ಎಂಥ ದಿಟ್ಟ ಎದೆಗಾರಿಕೆ ಅವರಲ್ಲಿ ಇರಬೇಕು. ಶರಣರು ಬರೆ ಅಂತರಜಾತಿ ವಿವಾಹ ಮೂಡಿಸುವುದಲ್ಲದೆ ಒಂದು ಮಠಕ್ಕೆ ಮಠಾಧೀಶರನ್ನಾಗಿ ಅಸ್ಪೃಶ್ಯನೊಬ್ಬನನ್ನು ತಂದು ಕೂಡಿಸಿದ್ದು ಅವರ ಜಾತಿ ನಿರ್ಮೂಲನದ ಪ್ರಯೋಗಶೀಲತೆಗೆ ಇದೊಂದು ಉದಾಹರಣೆ ಆಗಿದೆ.

ಶರಣರು ತಮ್ಮ ಸಾಮಾಜಿಕ ವ್ಯವಸ್ಥೆಯ ಪರಿಕಲ್ಪನೆಯಲ್ಲಿ ಧರ್ಮದ ಮೂಲ ಮತವನ್ನು ಬದಲಾಯಿಸಿದರು. ಆ ದಯವೇ ಧರ್ಮದ ಮೂಲವಾಗಿದ್ದು ಅದನ್ನು ಶರಣರು **"ದಯವಿಲ್ಲದ ಧರ್ಮ ಆದಾವುದಯ್ಯ"** ಎಂದು ಪ್ರಶ್ನಿಸಿ, ಪುರೋಹಿತ ಶಾಹಿಗಳ ಕಪಿಮುಷ್ಠಿಯಲ್ಲಿದ್ದ ಧರ್ಮವನ್ನು ಮುಕ್ತಗೊಳಿಸಿದರು. ಸ್ಥಾವರವನ್ನು ನಿರಾಕರಿಸಿ ಜಂಗಮವನ್ನು ಪ್ರತಿಪಾದಿಸಿದರು.

ಮಾಡಿದರು ಮಾಡಿದರು ತಮ್ಮ ಹಿತಕಲ್ಲದೆ
ಮತ್ತಾರ ಹಿತಕಲ್ಲ ನೋಡಯ್ಯ
ನೋಡಿದರು ನೋಡಿದರು ತಮ್ಮ ಹಿತಕಲ್ಲದೆ
ಮತ್ತಾರ ಹಿತಕ್ಕಲ್ಲ ನೋಡಯ್ಯ
ತನ್ನ ಬಿಟ್ಟನ್ನು ಹಿತವ ನೋಡಿದಡೆ
ಕೂಡಿಕೊಂಬ ನಮ್ಮ ಕಪಿಲ ಸಿದ್ಧಮಲ್ಲಯ್ಯ

ಈ ವಚನ ನೋಡಿದರೆ ಜನರು ತಮ್ಮ ಹಿತಕ್ಕಾಗಿಯೇ ಮಾಡುವರು. ಅದು ಸರಿ ಅಲ್ಲ; ಮನುಷ್ಯ ತನ್ನ ಹಿತವನ್ನು ಬಿಟ್ಟು ಅನ್ಯರ ಹಿತದ ಬಗ್ಗೆ ಒಂದಿಷ್ಟಾದರೂ ಚಿಂತಿಸಬೇಕೆಂದು ಶರಣರ ಮತ. ಅಂದಿನ ಸಮಾಜದಲ್ಲಿ ಸರ್ವರನ್ನು ಸಮಾನರನ್ನಾಗಿ ಕಾಣುತ್ತಿದ್ದರು. ನಾಳಿನ ಸಮಾಜದಲ್ಲಿ ಕೂಡ ಅಂತಹ ಸಮಭಾವ ತೋರಬೇಕೆಂಬ ಹೆಬ್ಬಯಕೆ ಅವರದು. "ದುಡಿಯುವ ಜನತೆ ಕೈಯಲ್ಲಿ ಅಧಿಕಾರ ಬಂದಾಗ ಅಲ್ಲಿ ಎಲ್ಲರೂ ಸಮಾನರೆಂಬ ಭಾವ ಬರುವುದು. ಆಗ ಎಲ್ಲೆಡೆ ಶಾಂತಿ ಸಮಾನತೆ ನೆಲೆಗೊಳ್ಳುವುದು."

ಶರಣರು ಕಟ್ಟ ಬಯಸಿದ ಸಮಾಜದಲ್ಲಿ ಕಾರ್ಲ್ ಮಾರ್ಕ್ಸ್‌ನ ತತ್ವಗಳನ್ನು ನಾವು ನೋಡಬಹುದು. ಕಾಯಕದಲ್ಲಿ ಮೇಲು ಕೀಳಿಲ್ಲ; ಅರ್ಥದ ಹಂಚಿಕೆಯಲ್ಲಿ ಅಸಮಾನತೆಯಿಲ್ಲ. ಇಲ್ಲಿ ಎಲ್ಲರೂ ಸಮಾನರಾಗಿದ್ದಾಗ ಅಧಿಕಾರದ ಪ್ರಶ್ನೆಯೇ ಇಲ್ಲ.

ಶರಣರು ಇತಿಹಾಸದ ನಿರ್ಮಾಪಕರು. ಜನ ಸಾಮಾನ್ಯರ ಜೀವನದ ರೀತಿಯನ್ನು ಚರಿತ್ರೆಯನ್ನಾಗಿಸಿದ ಅವರದು ಸರಳ ತತ್ವ, ಅಷ್ಟೇ ಸರಳ ಸಿದ್ಧಾಂತವು ಕೂಡ. **"ಕಳಬೇಡ ಕೊಲಬೇಡ ಹುಸಿಯ ನುಡಿಯಲು ಬೇಡ ಅನ್ಯರಿಗೆ ಅಸಹ್ಯ ಪಡಬೇಡ ತನ್ನ ಬಣ್ಣಿಸಲು ಬೇಡ, ಇದಿರು ಹಳಿಯಲು ಬೇಡ"** ಇದು ಸಾಮಾಜಿಕ ಬದುಕಿನಲ್ಲಿ ಆಚರಿಸಬೇಕಾದ ಶರಣ ಸಮಾಜದ ಜೀವನ ಮೌಲ್ಯಗಳು. ಇವುಗಳ ಮೂಲಕ ಅಂತರಂಗ ಹಾಗೂ ಬಹಿರಂಗ ಸಿದ್ಧಿಗಳೆರಡು ಸಾಧಿಸಬೇಕು ಇವುಗಳಲ್ಲಿ ವ್ಯತ್ಯಾಸ ಇರಕೂಡದು.

ಶರಣರ ಚಳುವಳಿಯ ನೈತಿಕ ಸಂಕಲ್ಪಗಳು ಸಾಮಾನ್ಯ ಜನತೆಯ ನಿತ್ಯದ ಬದುಕಿನ ಚಟುವಟಿಕೆಗಳ ಮೂಲ ಸ್ಥಿತಿಗಳಿಂದ ಚಿಮ್ಮಿಬಂದಿವೆ. ಅವರಿಗೆ ನೈತಿಕ ನಿಲವು ಮತ್ತು ಬದುಕಿನ ಬಗೆಗಿದ್ದ ಒಲವು ಅನುಕರಣೀಯ.

೨೦ನೇ ಶತಮಾನದ ಪ್ರಜಾಪ್ರಭುತ್ವದ ವ್ಯವಸ್ಥೆಯನ್ನು ಶರಣರು ಹನ್ನೆರಡನೆ ಶತಮಾನದಲ್ಲಿ ಕಟ್ಟಲು ಯತ್ನಿಸಿದರು. ಆರ್ಥಿಕ ಅಸಮಾನತೆಯನ್ನು ಸರಿಪಡಿಸಲು ಹಂಬಲವುಳ್ಳವರು ಆಗಿದ್ದರು. ಹಿಂದುಳಿದವರು, ಕೂಲಿಕಾರರು, ಮಹಿಳೆಯರು, ಸಾಮಾನ್ಯ ಜನರೆ! ಹೀಗೆ ಸರ್ವರಿಗೂ ಸಮಬಾಳು ದೊರೆಯುವ ಸಮಾಜವನ್ನು ಶರಣರು ಕಟ್ಟಿದರು.

ಜಗತ್ತಿನಲ್ಲಿ ನಿರಂತರವಾಗಿ ಪ್ರತಿಯೊಬ್ಬರು ಶಿವ ಶರಣರು ಹೇಳಿದ ಸತ್ಯ ಶುದ್ಧ ಕಾಯಕ ನಡೆಸಿದರೆ ಬಡತನವೇಕೆ ಇರುತ್ತದೆ? ಆಲಸ್ಯ ಉಳಿಯುತ್ತದೆ?

## 'ಸಿದ್ಧಗಂಗಾ' ಮಾಸಪತ್ರಿಕೆಯ ಆಜೀವ ಸದಸ್ಯರಲ್ಲಿ ಒಂದು ಮನವಿ

ಆತ್ಮೀಯರೆ,

ತಾವು ಅಭಿಮಾನ ಪೂರ್ವಕವಾಗಿ ಶ್ರೀಮಠದ ಮುಖವಾಣಿಯಾದ 'ಸಿದ್ಧಗಂಗಾ' ಮಾಸಪತ್ರಿಕೆಯ ಪುರೋಭಿವೃದ್ಧಿಗಾಗಿ ಆಜೀವ ಸದಸ್ಯರಾಗಿ ಪತ್ರಿಕೆಯ ಮುನ್ನಡೆಗಾಗಿ ಸಹಕರಿಸುತ್ತಿರುವುದಕ್ಕಾಗಿ ತುಂಬು ಹೃದಯದ ಕೃತಜ್ಞತೆಗಳು.

ವರ್ಷದಿಂದ ವರ್ಷಕ್ಕೆ ಮುದ್ರಣದ ವೆಚ್ಚ ದುಬಾರಿಯಾಗುತ್ತಿದ್ದು ಪತ್ರಿಕೆಯನ್ನು ಪ್ರಕಟಿಸಲು ತುಂಬಾ ಕಷ್ಟವಾಗುತ್ತಿದೆ. ಈ ಸಂದರ್ಭದಲ್ಲಿ ಅನಿವಾರ್ಯವಾಗಿ ಆಜೀವ ಸದಸ್ಯರಾಗಿರುವ ತಮ್ಮನ್ನು ಮತ್ತೊಮ್ಮೆ ಸಹಕಾರಕ್ಕಾಗಿ ಪ್ರಾರ್ಥಿಸುತ್ತಿದ್ದೇವೆ.

ತಾವು ಸಲ್ಲಿಸಿದ ಆಜೀವ ಸದಸ್ಯತ್ವದ ಮೊಬಲಗು ಪ್ರಾರಂಭದಲ್ಲಿ ೧೦೦ ರೂಗಳು ಎಂಬುದನ್ನು ತಮ್ಮಗಮನಕ್ಕೆ ತರಬಯಸುತ್ತೇವೆ. ಅನಂತರದಲ್ಲಿ ೧೫೦, ಮತ್ತು ೨೫೦ ಹಾಗೂ ೩೫೦ ರೂ.ಗಳಿಗೆ ನಿಗಧಿ ಪಡಿಸಲಾಗಿತ್ತು. ಈಗ ಆಜೀವ ಸದಸ್ಯತ್ವದ ಮೊಬಲಗು ೫೦೦ ರೂ.ಗಳಾಗಿರುತ್ತದೆ. ಆದುದರಿಂದ ತಾವು ದಯವಿಟ್ಟು ಪ್ರಸ್ತುತ ಐದುನೂರು ರೂ.ಗಳಿಗೆ ಸರಿಹೊಂದುವಂತೆ ಉಳಿದ ಹಣವನ್ನು ಕಳುಹಿಸಿ ಕೊಡಬೇಕಾಗಿ ವಿನಂತಿಸಿಕೊಳ್ಳುತ್ತೇವೆ.

ಪತ್ರಿಕೆ ೧೯೯೮ರ ಜನವರಿಯಿಂದ ಹೊಸ ವಿನ್ಯಾಸ ಆಕರ್ಷಕ ಮುಖಪುಟದೊಂದಿಗೆ ಪ್ರಕಟವಾಗುತ್ತಿರುವುದು ತಮಗೆ ತಿಳಿದಿದೆ. ಈ ಸಂದರ್ಭದಲ್ಲಿ ತಮ್ಮ ಸಹಕಾರವನ್ನು ನಿರೀಕ್ಷಿ ಸುತ್ತೇವೆ.

**ಹೆಚ್. ಬಿ. ಗಂಗಾಧರಯ್ಯ**
ಪ್ರಕಾಶಕರು
ಸಿದ್ಧಗಂಗಾ ಮಾಸಿಕ





## "ಸದಭಿಮಾನದ ಗೂಡು ಚೆಲುವ ಕನ್ನಡ ನಾಡು"

- ಹುಯಿಲುಗೋಳ ನಾರಾಯಣರಾವ್

**ಕೃಷ್ಣ, ಕಾವೇರಿ, ತುಂಗೆಯರ ವರನಾಡು**
**ಕೇದಿಗೆ, ಜಾಜಿ, ಮಲ್ಲಿಗೆ ಮುತ್ತುಗಳ ಮಲೆನಾಡು**
**ನಮ್ಮೀ ಕರುನಾಡು**

ನವೆಂಬರ್ ೧, ೧೯೫೬ ಕನ್ನಡಿಗರ ಬಹು ದಿನದ ಕನಸು ನನಸಾದ ಸುದಿನ. ಕನ್ನಡಾಂಬೆಯ ಮಕ್ಕಳು, ಐತಿಹಾಸಿಕವಾಗಿ ಒಂದೇ ಭಾಷೆ, ಕಲೆ, ಸಂಸ್ಕೃತಿ ಪರಂಪರೆಗಳನ್ನು ಹೊಂದಿದ್ದರೂ ಪರಿಸ್ಥಿತಿಯ ಪ್ರಭಾವಕ್ಕೊಳಗಾಗಿ ನಾಲ್ಕು ದಿಕ್ಕುಗಳಲ್ಲಿ ಚದುರಿ ಹೋಗಿದ್ದರು. ಆದರ ಭಾಷೆ, ಸೊಡರು, ನೆಲದ ಮಣ್ಣಿನ ವಾಸನೆ, ಸಂಸ್ಕೃತಿಯ ಪ್ರಭಾವಳಿ ಅವರನ್ನು ಪರಸ್ಪರ ಅಭಿಮುಖಿರನ್ನಾಗಿಸಿದವು. ಐಕ್ಯತೆಗೆ ಪ್ರೇರೇಪಿಸಿದವು. ಅಭಿಪ್ರಾಯ ಭೇದ, ಜಾತಿ ಮತ, ಪಂಗಡಗಳೆಂಬ ಭಿನ್ನತೆಗಳು. **"ಕನ್ನಡ ಕಸ್ತೂರಿ"** ಕಂಪಿನ ಮೋಹಕ ಪರಿಮಳಕ್ಕೆ ಪರವಶವಾಗಿ ಮೆಲ್ಲನೆ ಮುದುಡಿ ಹೋದವು. ಐಕ್ಯತೆಯೊಂದೇ ತಾರಕ ಮಂತ್ರವಾಯಿತು. ಭಾಷೆಯ ಬೆಸುಗೆ ಏಕೀಕೃತ ಕರ್ನಾಟಕಕ್ಕೆ ನಾಂದಿ ಹಾಡಿತು. ಕನ್ನಡಿಗರ ಒಗ್ಗಟ್ಟಿನ ಹೋರಾಟಕ್ಕೆ ಸಂದ ಜಯ **ಏಕೀಕೃತ ಕರ್ನಾಟಕ.**

- ❒ ಸಾಹಿತ್ಯಾರಾಧನೆ, ಕಲೋಪಾಸನೆ, ಸಂಸ್ಕೃತಿ ಸಮ್ಮೋಹಕಗಳ ತಾಣವಾಗಿರುವ ಕನ್ನಡ ನಾಡು ಭವ್ಯ ಇತಿಹಾಸ ಸಾರುವ ಸಮೃದ್ಧ ಬೀಡು.
- ❒ ಪಂಪ, ರನ್ನ, ಪೊನ್ನ, ಜನ್ನ, ಲಕ್ಷ್ಮೀಶರಂತಹ ಮಹಾನ್ ಕವಿರತ್ನರಿಗೆ ಜನ್ಮನೀಡಿ ತನ್ನ ಮಹಾನ್ ಸೊಬಗಿನ ಸೊಡರನ್ನು ಮೆರೆದ ಕನ್ನಡಾಂಬೆ, ನೃಪತುಂಗ ದೊರೆಯ ನಾಲಿಗೆಯಲ್ಲಿ ಶಾರದಾಂಬೆಯಾಗಿ ನಲಿದು, ಕನ್ನಡಿಗರನ್ನು ಚೆಲುವಿನ ರೂಪವುಳ್ಳವರು., ಗುಣವಂತರು. ಶೂರರು, ತ್ಯಾಗಿಗಳು, ಸದಾ ಹಸನ್ಮುಖಿಗಳೂ ಎಂದು ಬಣ್ಣಿಸಿದ ಪರಿ ಮೈಮನ ಕುಣಿಸುವುದು.
- ❒ ಹಂಪಿ, ಬೇಲೂರು ಹಳೇಬೀಡು, ಪಟ್ಟದಕಲ್, ಐಹೊಳೆ, ಶ್ರವಣಬೆಳಗೊಳ, ಗೋಲಗುಂಬಜ್‌ಗಳು ಅಂದಿನ ವಿಜಯನಗರದ ಅರಸರು, ಚಾಲುಕ್ಯರು, ರಾಷ್ಟ್ರಕೂಟರು ಹೊಯ್ಸಳರು, ಗಂಗರು, ಸುಲ್ತಾನರು, ಒಡೆಯರ್‌ರ ಕಲೆಯ ವೈಭವ, ಆದರ್ಶ ಆಡಳಿತ ಮತ್ತು ಮೇರು ಕಲಾಪ್ರೌಢಿಮೆಗೆ ಮೂಕಸಾಕ್ಷಿಯಾಗಿ ನಿಂತಿವೆ.
- ❒ ಜೋಗ್, ಬಂಡಿಪುರ, ನಾಗರಹೊಳೆ, ಹೊರನಾಡುಗಳಂತಹ ನಿಸರ್ಗ ತಾಣಗಳು ಪ್ರವಾಸಿಗರನ್ನು ಪುಳಕಿತಗೊಳಿಸುವ ಸುಂದರ ತಾಣಗಳು.
- ❒ ಬಸವಣ್ಣ, ಅಕ್ಕಮಹಾದೇವಿ,ಹರಳಯ್ಯ, ಮಡಿವಾಳ ಮಾಚಯ್ಯರಂತಹ ಶ್ರೇಷ್ಠ ಶರಣರು, ಪುರಂದರದಾಸ, ಕನಕದಾಸರಂತಹ ದಾಸವರೇಣ್ಯರು, ಶಿಶುನಾಳ ಷರೀಫ್‌ರಂತಹ ಸಂತರಿಗೂ ಜನ್ಮನೀಡಿ ರಾಮಾನುಜರಿಗೆ ಆಶ್ರಯ ನೀಡಿದ ಕನ್ನಡಾಂಬೆ ಆ ಮೂಲಕ ಸಾಹಿತ್ಯ ಸಮಾಜ ಸುಧಾರಣೆ, ಧಾರ್ಮಿಕ ಮೂಢನಂಬಿಕೆಗಳ ಮೂಲೋತ್ಪಾಟನೆ, ಸಮಾನತೆಗಳನ್ನು ಸಾಧಿಸಿ ತನ್ನ ಹಿರಿಮೆಯನ್ನು ನಾಲ್ದೆಸೆಗಳಲ್ಲಿ ಹರಡಿಸಿದ್ದರ ಪರಿ ಕನ್ನಡಿಗರೆಲ್ಲರನ್ನೂ ಹೆಮ್ಮೆಯಿಂದ ಬೀಗಿಸುವುದು.

ನಾಡು, ನುಡಿ, ಸಂಸ್ಕೃತಿ,ಕಲೆ ಸಾಹಿತ್ಯ ಪ್ರಕಾರಗಳು ನಿರಂತರವಾಗಿ ತಮ್ಮಹಿರಿಮೆ ಮೆರೆಯಲು ಕಾರಣರಾದ ಮಹನೀಯರನೇಕರು - ಆಲೂರು ವೆಂಕಟರಾವ್, ಬೆನಗಲ್ ರಾಮರಾವ್, ಹರ್ಡೇಕರ್ ಮಂಜಪ್ಪ, ಡೆಪ್ಯುಟಿ ಚೆನ್ನಬಸಪ್ಪ, ಚಿಟಗೇರಿ ಕೃಷ್ಣಶರ್ಮ, ಗೋವಿಂದ ಪೈ, ಬಿ.ಎಂ. ಶ್ರೀ, ಅ.ನ.ಕೃಷ್ಣರಾವ್, ಹುಯಿಲುಗೋಳ ನಾರಾಯಣರಾವ್, ಕಾರ್ನಾಡ್ ಸದಾಶಿವರಾವ್, ಕಡಪ ರಾಘವೇಂದ್ರರಾವ್, ದೇಶಪಾಂಡೆ ಗಂಗಾಧರರಾವ್, ಮಿರ್ಜಿ ಅಣ್ಣಾರಾವ್, ಅಂದಾನಪ್ಪ ದೊಡ್ಡಮೇಟಿ ಮುಂತಾದವರ ಹೋರಾಟದ ಫಲ, ಏಕೀಕೃತ ಕನ್ನಡನಾಡು.

ಕರ್ನಾಟಕದ ಕೀರ್ತಿ ಪತಾಕೆ ಸದಾ ಬಾನಗಲದಲ್ಲಿ ವಿಜೃಂಭಿಸುತ್ತಿರುವುದಕ್ಕೆ ಕುವೆಂಪು, ಅಂಬಿಕಾತನಯದತ್ತ,ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶಿವರಾಮ ಕಾರಂತ, ವಿ.ಕೆ.ಗೋಕಾಕ್ ಯು.ಆರ್. ಅನಂತಮೂರ್ತಿಗಳಂತಹ ಸಾಹಿತಿಗಳ ಶ್ರೇಷ್ಠ ಸಾಹಿತ್ಯ, ವೆಂಕಟಪ್ಪ, ಕೆ.ಕೆ. ಹೆಬ್ಬಾರ್ ಆರ್.ಕೆ. ಲಕ್ಷ್ಮಣ್, ಕೆ.ವಿ. ಸುಬ್ಬಣ್ಣ ಅವರುಗಳ ಸಮಕಾಲೀನ ಶ್ರೇಷ್ಠಕಲೆ ಹಾಗೂ ಡಾ. ಸಿ. ವಿ. ರಾಮನ್, ಡಾ. ಸಿ. ಎನ್. ಆರ್. ರಾವ್, ಡಾ. ಯು.ಆರ್. ರಾವ್, ಡಾ. ರಾಜಾರಾಮಣ್ಣರಂತಹ ವಿಖ್ಯಾತ ವಿಜ್ಞಾನಿಗಳು, ಪ್ರಸನ್ನ, ಚಂದ್ರಶೇಖರ್, ಪ್ರಕಾಶ್ ಪಡುಕೋಣೆ, ಅಶ್ವಿನಿ ನಾಚಪ್ಪರಂತಹ ಕ್ರೀಡಾಪಟುಗಳು ನಾಡಿನ ಭವ್ಯ ಪರಂಪರೆಯನ್ನು ಮುಂದುವರಿಸಿರುವುದೇ ಕಾರಣ.

ಐತಿಹಾಸಿಕ ಭವ್ಯತೆ ಮತ್ತು ಶ್ರೇಷ್ಠ ಆದರ್ಶಗಳಿಗೆ ಪೂರಕವಾಗಿ ರಾಜ್ಯ ಪ್ರಗತಿಯ ಮುಂಚೂಣಿಯಲ್ಲಿರಬೇಕೆಂದು ಸದಾ ಶ್ರಮಿಸುತ್ತಿರುವ ಮುಖ್ಯಮಂತ್ರಿ ಶ್ರೀ ಜೆ.ಹೆಚ್. ಪಟೇಲರವರ ಕ್ರಿಯಾಶೀಲ ನಾಯಕತ್ವದ ಸರ್ಕಾರ ರಾಜ್ಯದ ವಿವಿಧ ಕ್ಷೇತ್ರಗಳಲ್ಲಿ ಸಾಧಿಸಿದ ಅಭಿವೃದ್ಧಿ ಗಣನೀಯ.

"ಸಮಾಜದ ಎಲ್ಲ ದುರ್ಬಲ ವರ್ಗಗಳ ಅಭಿವೃದ್ಧಿಯನ್ನು ಶಾಂತಿ ಸೌಹಾರ್ದತೆಯೊಂದಿಗೆ ಸಾಧಿಸಿ ರಾಜ್ಯದ ಸರ್ವತೋಮುಖ ಬೆಳವಣಿಗೆಯ ತನ್ನ ದೃಢ ಸಂಕಲ್ಪಕ್ಕೆ ಸರ್ಕಾರ ಸದಾ ಕಂಕಣಬದ್ಧ. ಬಡತನ, ನಿರುದ್ಯೋಗ ಮತ್ತು ಸಾಮಾಜಿಕ ಅಸಮತೋಲನ ನಿವಾರಣೆಗಾಗಿ ನಾವೆಲ್ಲರೂ ಒಗ್ಗಟ್ಟಿನಿಂದ ದುಡಿಯೋಣ. ಆ ಮೂಲಕ ರಾಷ್ಟ್ರದ ಜಾತ್ಯಾತೀತತೆ ಮತ್ತು ಸಮಗ್ರತೆಯನ್ನು ಮತ್ತಷ್ಟು ಬಲಪಡಿಸೋಣ."

**ಜೆ. ಹೆಚ್. ಪಟೇಲ್**
ಮುಖ್ಯಮಂತ್ರಿಗಳು

## ಪ್ರಗತಿಯ ಪಕ್ಷಿನೋಟ

**ನೀರಾವರಿ :** ೧೯೯೭-೯೮ರವರೆಗೆ ನೀರಾವರಿಗೆ ಒಳಪಟ್ಟ ಪ್ರದೇಶ ೨೬.೭೭ ಲಕ್ಷ, ಹೆಕ್ಟೇರು. ರಾಜ್ಯದಲ್ಲಿ ೫೫ ಲಕ್ಷ ಹೆಕ್ಟೇರುನಷ್ಟು ನೀರಾವರಿ ಪ್ರದೇಶಕ್ಕೆ ಅವಕಾಶವಿದೆ. ೧೯೯೭-೯೮ರಲ್ಲಿ ನೀರಾವರಿಗಾಗಿ ರೂ. ೧,೫೧೭.೯೬ ಕೋಟಿ.

**ವಿದ್ಯುಚ್ಛಕ್ತಿ :** ೧೯೯೭-೯೮ರಲ್ಲಿ ೧೬,೫೧೩ ದಶಲಕ್ಷ ಯೂನಿಟ್ ಉತ್ಪಾದನೆ.

**ಕೈಗಾರಿಕೆ :** ೧೯೯೮ರ ವೇಳೆಗೆ ೩,೧೧,೫೦೦ ಕೈಗಾರಿಕಾ ಘಟಕಗಳು, ೧೭.೯೫ ಲಕ್ಷಕ್ಕೂ ಹೆಚ್ಚು ಮಂದಿಗೆ ಉದ್ಯೋಗಾವಕಾಶ ಕಲ್ಪಿಸಿದೆ. ಕರ್ನಾಟಕ ಇಡೀ ದಕ್ಷಿಣ ಭಾರತದಲ್ಲಿ ಬಂಡವಾಳ ಹೂಡಿಕೆಗೆ ಮೊದಲ ಆದ್ಯತೆಯ ರಾಜ್ಯ.

**ಇಂಟರ್‌ನ್ಯಾಷನಲ್ ಟೆಕ್‌ಪಾರ್ಕ್ :** ಬೆಂಗಳೂರಿನಲ್ಲಿ ವೈಟ್ ಫೀಲ್ಡ ಬಳಿ ಇರುವ ರೂ. ೧,೫೪೦ ಕೋಟಿ ಮೌಲ್ಯದ ಇನ್‌ಫರ್‌ಮೇಷನ್ ಟೆಕ್ನಾಲಜಿ ಪಾರ್ಕ್ ಟಾಟಾ ಸಮುಚ್ಛಯ ಹಾಗೂ ಐ.ಟಿ.ಪಿ. ಲಿಮಿಟೆಡ್ ಸಿಂಗಪೂರ್ ಸಹಯೋಗದೊಂದಿಗೆ ರೂಪುಗೊಂಡಿದೆ.

**ಪರಿಕರಾಭಿವೃದ್ಧಿ :** ೧೯೯೭-೯೮ರಲ್ಲಿ ಆದರ್ಶ ಹಾಗೂ ಆಧುನಿಕ ಸಾರಿಗೆ ಜಾಲವನ್ನು ನಿರ್ಮಿಸಲು ರಸ್ತೆ ನಿಧಿ ಸ್ಥಾಪನೆ.

**ಶಿಕ್ಷಣ :** ರಾಜ್ಯದ ಸಾಕ್ಷರತೆ ಶೇ. ೫೬ ರಷ್ಟಕ್ಕೆ ಹೆಚ್ಚಿದೆ. ರಾಜ್ಯದಲ್ಲಿ ಶೇ. ೧೦೦ ಸಾಕ್ಷರತೆ ಕೈಗೂಡಿಸಿಕೊಳ್ಳಲು ಬೃಹತ್ ಕಾರ್ಯಕ್ರಮಗಳು ಕಳೆದ ಮೂರು ವರ್ಷಗಳಲ್ಲಿ ೭೦,೫೩೦ ಪ್ರಾಥಮಿಕ ಶಾಲಾ ಅಧ್ಯಾಪಕರ ನೇಮಕಾತಿ ೨,೪೭೫ ಪ್ರೌಢಶಾಲಾ ಅಧ್ಯಾಪಕರ ಹಾಗೂ ೮೦೦ ಮುಖ್ಯೋಪಾಧ್ಯಾಯರುಗಳ ನೇಮಕಾತಿ.

**ಆರೋಗ್ಯ :** ೧೯೯೭-೯೮ರಲ್ಲಿ ೧೧.೧೨ ಲಕ್ಷ ಮಕ್ಕಳಿಗೆ ಪಲ್ಸ್‌ಪೋಲಿಯೊ ಲಸಿಕೆ ಹಾಗೂ ೧೨ ಲಕ್ಷ ಮಕ್ಕಳಿಗೆ ರೋಗ ನಿರೋಧಕ ಚುಚ್ಚುಮದ್ದು ಕಾರ್ಯಕ್ರಮ ಪೂರ್ಣ, ೪೦ ಲಕ್ಷ ಮಕ್ಕಳಿಗೆ ಆರೋಗ್ಯ ತಪಾಸಣೆ ಬೃಹತ್ ಕಾರ್ಯಕ್ರಮ.

**ವಸತಿ :** ಕಳೆದ ಮೂರು ವರ್ಷಗಳಲ್ಲಿ ವಿವಿಧ ವಸತಿ ಯೋಜನೆಗಳಡಿ ೩.೫೦ ಲಕ್ಷ ಮನೆಗಳ ನಿರ್ಮಾಣ. ೧೯೯೮-೯೯ರ ಅಂತ್ಯದ ವೇಳೆಗೆ ೫ ಲಕ್ಷ ಮನೆಗಳ ನಿರ್ಮಾಣದ ಗುರಿ.

**ಕೃಷಿ, ತೋಟಗಾರಿಕೆ ಮತ್ತು ಪಶುಸಂಗೋಪನೆ :** ಕರ್ನಾಟಕ ದರ್ಶನ ಕಾರ್ಯಕ್ರಮಗಳ ಮೂಲಕ ರೈತರಿಗೆ ಅಧ್ಯಯನ ಪ್ರವಾಸ ಸೌಕರ್ಯ. ಪ್ರಗತಿಪರ ರೈತರಿಗೆ ಕೃಷಿ ಪ್ರಶಸ್ತಿ, ೨,೩೪೩ ಪ್ರಶಸ್ತಿ ವಿಜೇತರು.

**ಸಮಾಜ ಕಲ್ಯಾಣ :** ಪರಿಶಿಷ್ಟ ಜಾತಿ, ವರ್ಗದ ಹಾಗೂ ಹಿಂದುಳಿದ ವರ್ಗಗಳ ರೈತರ ಜಮೀನಿಗೆ ನೀರುಣಿಸಲು ಗಂಗಾ ಕಲ್ಯಾಣ ಕಾರ್ಯಕ್ರಮ, ಅಂಬೇಡ್ಕರ್‌ವಸತಿ ಯೋಜನೆಯಡಿ ಪರಿಶಿಷ್ಟ ಜಾತಿ, ವರ್ಗಗಳಿಗೆ ಹಿಂದಿನ ವರ್ಷಗಳಲ್ಲಿ ವಿತರಣೆಗೆ ಬಾಕಿ ಇದ್ದ ೬೦,೦೦೦ ಮನೆಗಳೊಂದಿಗೆ ೧೯೯೮-೯೯ರಲ್ಲಿ ಇನ್ನೂ ೨೦,೦೦೦ ಮನೆಗಳ ವಿತರಣೆ. ಸಮಗ್ರ ಶಿಶು ಅಭಿವೃದ್ಧಿ ಕಾರ್ಯಕ್ರಮದಡಿ ೧೯೯೮-೯೯ರಲ್ಲಿ ೩೩ ಲಕ್ಷ ಫಲಾನುಭವಿಗಳಿಗೆ ಸೌಲಭ್ಯ.

**ಗ್ರಾಮೀಣಾಭಿವೃದ್ಧಿ :** ಮುಂದಿನ ೨ ವರ್ಷಗಳಲ್ಲಿ ರಾಜ್ಯದ ಎಲ್ಲಾ ಗ್ರಾಮಗಳಿಗೂ ಕುಡಿಯುವ ನೀರು ಒದಗಿಸಲು ರೂ. ೯೦೦ ಕೋಟಿ ವೆಚ್ಚದ ಸಮಗ್ರ ಯೋಜನೆ.

**ಕರ್ನಾಟಕ ಉದಾತ್ತ ಧ್ಯೇಯ, ಉಜ್ವಲ ಭವಿಷ್ಯ**

**ಕರ್ನಾಟಕ ವಾರ್ತೆ**

ಹಾರ್ದಿಕ ಶುಭಾಶಯಗಳೊಂದಿಗೆ (ಸ್ಥಾಪನೆ : 1982)

## ಶ್ರೀ ಸಿದ್ಧಗಂಗಾ ವಿದ್ಯಾಸಂಸ್ಥೆ ನೌಕರರ ಪತ್ತಿನ ಸಹಕಾರ ಸಂಘ ನಿಯಮಿತ

ಎಸ್.ಐ.ಟಿ. ಕ್ಯಾಂಪಸ್, ತುಮಕೂರು-572 103

| | | |
|---|---|---|
| ಸದಸ್ಯರ ಸಂಖ್ಯೆ | : | 1072 |
| ಷೇರು ಮೊಬಲಗು | : | ರೂ. 16,03,400.00 |
| ವಾರ್ಷಿಕ ವಹಿವಾಟು | : | ರೂ. 1.8 ಕೋಟಿ |
| ಖಾಯಂ ಠೇವಣಿ ಮೇಲಿನ ಬಡ್ಡಿ | : | 46 ದಿನಗಳಿಂದ 1 ವರ್ಷಕ್ಕೆ 12.5% |
| | : | 1 ವರ್ಷದಿಂದ 2 ವರ್ಷಕ್ಕೆ 13.5% |
| | : | 2 ವರ್ಷದಿಂದ 3 ವರ್ಷಕ್ಕೆ 15.0% |
| | : | 3 ವರ್ಷಕ್ಕೆ ಮೇಲ್ಪಟ್ಟು 16.0% |
| ಸದಸ್ಯರುಗಳಿಗೆ ಸಾಲದ ಸೌಲಭ್ಯ | : | ರೂ. 50,000.00 ಗಳವರೆಗೆ |

ಡಾ|| ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು - ಗೌರವಾಧ್ಯಕ್ಷರು

ಪ್ರೊ. ಬಿ. ಗಂಗಾಧರಯ್ಯ, ಅಧ್ಯಕ್ಷರು     ಶ್ರೀ ಎಸ್. ವಿಶ್ವನಾಥಯ್ಯ, ಉಪಾಧ್ಯಕ್ಷರು

---

ಶುಭಾಶಯಗಳೊಂದಿಗೆ

ಸ್ಥಾಪನೆ : 1995     ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ     ದೂರವಾಣಿ : 77267

## ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,

ಬಿ. ಹೆಚ್. ರಸ್ತೆ, ತುಮಕೂರು - 572102

**ಪ್ರಗತಿ ನೋಟ** (31-1-1998ರಲ್ಲಿದ್ದಂತೆ)

ಸದಸ್ಯರ ಸಂಖ್ಯೆ -2861     (ಲಕ್ಷ ರೂ.ಗಳಲ್ಲಿ)

| | | | |
|---|---|---|---|
| ಅಧಿಕೃತ ಷೇರು ಬಂಡವಾಳ | 50.00 | ಠೇವಣಿಗಳು | 719.15 |
| ಪಾವತಿಯಾದ ಷೇರು ಬಂಡವಾಳ | 46.94 | ಚಾಲ್ತಿ ಬಂಡವಾಳ | 776.91 |
| ಕಾಯ್ದಿರಿಸದ ನಿಧಿಗಳು | 10.82 | ಸಾಲಗಳು | 496.63 |

**ನಿಶ್ಚಿತ ಠೇವಣಿಗಳ ಮೇಲೆ ನೀಡುವ ಬಡ್ಡಿ ದರ (9.5.1998 ರಿಂದ)**

| | | | |
|---|---|---|---|
| 30 ದಿವಸದಿಂದ 180 ದಿನಗಳವರೆಗೆ | - 10% | 181ದಿವಸಗಳಿಂದ 1 ವರ್ಷದವರೆಗೆ | - 11% |
| 1 ವರ್ಷದಿಂದ 2 ವರ್ಷಗಳವರೆಗೆ | - 12% | 2 ವರ್ಷದಿಂದ ಮೇಲ್ಪಟ್ಟು | - 13% |
| ಉಳಿತಾಯ ಖಾತೆ | - 5.5% | | |

ಶ್ರೀ ಟಿ. ಕೆ. ನಂಜುಂಡಪ್ಪ, ಅಧ್ಯಕ್ಷರು     ಶ್ರೀ ಕೆ. ಎಸ್. ಶಂಕರಯ್ಯ, ಉಪಾಧ್ಯಕ್ಷರು     ನಟರಾಜು, ವ್ಯವಸ್ಥಾಪಕರು





# ವೀರಶೈವ ಸಹಕಾರ ಬ್ಯಾಂಕ್ ನಿಯಮಿತ

ಅಕ್ಕಿಪೇಟೆ, ಬೆಂಗಳೂರು - 560 053. ದೂರವಾಣಿ :2871003, 2282224

**ಶಾಖೆಗಳು :**

ನಂ. 265 ಡಿ, ಕನಕಪುರ ಮುಖ್ಯ ರಸ್ತೆ, 7ನೇ ಬ್ಲಾಕ್, ಜಯನಗರ, ಬೆಂಗಳೂರು-82 ದೂರವಾಣಿ : 649183

ನಂ. 391/32, 12ನೇ ಮುಖ್ಯರಸ್ತೆ, 6ನೇ ವಿಭಾಗ, ಡಾ. ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-10. ದೂರವಾಣಿ : 3402145

ನಂ. 1732 : 32, ಎಂ. ಸಿ. ರಸ್ತೆ, ವಿಜಯನಗರ ಬಸ್ ಸ್ಟಾಪ್ ಹತ್ತಿರ, ಬೆಂಗಳೂರು-560 040. ದೂರವಾಣಿ : 3358017

ನಂ. 324, 8ನೇ ಮುಖ್ಯರಸ್ತೆ, 1ನೇ ಅಡ್ಡರಸ್ತೆ, 3ನೇ ಹಂತ, ಬಸವೇಶ್ವರನಗರ, ಬೆಂಗಳೂರು-79. ದೂರವಾಣಿ : 3485393.

❖ ರಿಸರ್ವ್ ಬ್ಯಾಂಕ್ ನಿಯಮಾವಳಿಗೆ ಒಳಪಟ್ಟಿದೆ.

❖ ಸೇಫ್ ಡಿಪಾಸಿಟ್ ಲಾಕರುಗಳ ವ್ಯವಸ್ಥೆಯಿದೆ.

❖ ಠೇವಣಿಗಳಿಗೆ ವಿಮಾ ಸೌಲಭ್ಯ ಒದಗಿಸಲಾಗಿದೆ.

ಠೇವಣಿಗಳ ಮೇಲೆ ವಾಣಿಜ್ಯ ಬ್ಯಾಂಕುಗಳಿಗಿಂತ ಶೇಕಡ ½ದಷ್ಟು ಅಧಿಕ ಬಡ್ಡಿ ದೊರೆಯುತ್ತದೆ. ನೀವು ತೊಡಗಿಸುವ ಹಣಕ್ಕೆ ಸುರಕ್ಷೆ ಒದಗಿಸುವ ಸಂಸ್ಥೆ. ನೀವು ತೊಡಗಿಸುವ ಹಣವನ್ನು ಇಮ್ಮಡಿಯಾಗಿ ಅಥವಾ ಮುಮ್ಮಡಿಯಾಗಿ ಹೆಚ್ಚಿಸುವ ಅವಕಾಶವಿರುವ ಸಂಸ್ಥೆ. ನಿಮ್ಮ ಮಕ್ಕಳ, ನಿಮ್ಮ ಆಶ್ರಿತರ ಹಾಗೂ ನಿಮ್ಮ ಭವಿಷ್ಯದ ಹಿತರಕ್ಷಣೆ ಮಾಡುವ ಸಂಸ್ಥೆ.

**(31-03-1998ರಲ್ಲಿದ್ದಂತೆ) (ಲಕ್ಷ ರೂ.ಗಳಲ್ಲಿ)**

| | | | | | |
|---|---|---|---|---|---|
| ಷೇರು ಬಂಡವಾಳ | : | 85.96 | ಹೂಡಿಕೆಗಳು | : | 651.12 |
| ಸಾಲಗಳು ಮತ್ತು ಮುಂಗಡ | : | 1347.69 | ದುಡಿಯುವ ಬಂಡವಾಳ | : | 2104.37 |
| ಠೇವಣಿಗಳು | : | 1862.20 | ನಿವ್ವಳ ಲಾಭ | : | 29.05 |

**ಶ್ರೀ ಬಿ.ಎಸ್. ಪರಮಶಿವಯ್ಯ**, ಎಂ.ಎ., ಅಧ್ಯಕ್ಷರು     **ಶ್ರೀ ಎಲ್. ರಾಜಪ್ಪ**, ಉಪಾಧ್ಯಕ್ಷರು

**ನಿರ್ದೇಶಕರು**

ಶ್ರೀ ಬಿ.ಟಿ. ಉಮೇಶ್, ಬಿ.ಎ. ಎಲ್.ಎಲ್.ಬಿ.
ಶ್ರೀ ಬಿ.ಎಂ. ಶ್ರೀಕಂಠಸ್ವಾಮಿ, ಎಲ್.ಇ.ಇ.
ಶ್ರೀ ಆರ್. ನೀಲಕಂಠಯ್ಯ
ಶ್ರೀ ಆರ್. ಜಿ. ಶಿವಕುಮಾರ್
ಶ್ರೀ ಜಿ. ಶಿವಕುಮಾರ್, ಡಿ.ಎಂ.ಇ
ಶ್ರೀ ಬಿ.ಎಸ್. ಸಚ್ಚಿದಾನಂದಮೂರ್ತಿ, ಎಂ.ಎ.,
ಶ್ರೀ ದಕ್ಷಿಣಾ ಮೂರ್ತಿ, ಬಿ.ಎಸ್ಸಿ, ಸಿ.ಎ.ಐ.ಐ.ಬಿ.
ಶ್ರೀ ಬಿ.ಜಿ. ನಾಗಬಸಪ್ಪ
ಶ್ರೀ ವೈ.ಟಿ. ಮಹಾದೇವಪ್ಪ
ಶ್ರೀ ಬಿ.ಎಸ್. ಬಾಲರಾಜ್, ಬಿ.ಎಸ್ಸಿ, ಟೆಕ್ಸ್‌ಟೈಲ್
ಶ್ರೀ ಬಿ. ಬಸವರಾಜ್, ಬಿ.ಎಸ್ಸಿ, ಬಿ.ಎಲ್.
ಡಾ|| ಮಲ್ಲಿಕಾರ್ಜುನ್, ಎಂ.ಎ., ಪಿಎಚ್.ಡಿ
ಶ್ರೀಮತಿ ಎಸ್. ಗಿರಿಜಾ, ಬಿ.ಎಸ್ಸಿ.

**ಪ್ರಧಾನ ವ್ಯವಸ್ಥಾಪಕರು**

**ಶ್ರೀ ಬಿ.ವಿ. ನಾಗರಾಜ**, ಬಿ.ಕಾಂ., ಡಿ.ಸಿ.ಬಿ.

*Printed at : Geetanjali Printers, Bangalore-54*

